# ಜನನ ಮರಣಗಳಾಚೆ





ಶ್ರೀ ಶ್ರೀಮದ್
ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ
ಅಂತಾರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘದ ಸಂಸ್ಥಾಪಕಾಚಾರ್ಯರು

# ಶ್ರೀಲ ಪ್ರಭುಪಾದರ ಬಗ್ಗೆ ವಿದ್ವಾಂಸರು ಹೇಳುವುದೇನು?

## ಅವರ ಬಳುವಳಿ : ದಿವ್ಯ ಸಾಹಿತ್ಯ

"ಶ್ರೀಲ ಪ್ರಭುಪಾದರ ಕೃತಿಗಳು ಆಳವಾದ ಪಾಂಡಿತ್ಯವನ್ನು ಪ್ರದರ್ಶಿಸುತ್ತವೆ ... ಶ್ಲೋಕಗಳ ಅವರ ಭಾಷಾಂತರಗಳು ಸ್ಫುಟವಾಗಿವೆ ಮತ್ತು ಮೂಲದ ನಿಜಭಾವವನ್ನು ಪ್ರಕಟಿಸುತ್ತವೆ . . . ಅವರ ಗ್ರಂಥಗಳು ಭಾರತೀಯ ದರ್ಶನ, ಧರ್ಮ, ಮತ್ತು ಸಂಸ್ಕೃತಿಯ ವಿಶ್ವಕೋಶವೇ ಆಗಿವೆ."

—ಡಾ || ರಂಜನ್ ಬೋರಾ
ಅಮೇರಿಕ ಲೈಬ್ರರಿ ಕಾಂಗ್ರೆಸ್ U.S.A.

"1968ರ ಅಕ್ಟೋಬರ್‌ನಿಂದ 1975ರ ನವೆಂಬರ್‌ವರೆಗಿನ ಅವಧಿಯಲ್ಲಿ ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದರು ಪ್ರಾಚೀನ ವೈದಿಕ ಸಂಸ್ಕೃತಿಯನ್ನು ಕುರಿತು 52 ಗ್ರಂಥಗಳನ್ನು ರಚಿಸಿ ಮತ್ತು ಪ್ರಕಟಿಸಿ ಜಗತ್ತಿನ ಶೈಕ್ಷಣಿಕ ಮತ್ತು ಸಾಹಿತ್ಯಿಕ ಸಮುದಾಯಗಳನ್ನು ಬೆರಗುಗೊಳಿಸಿದ್ದಾರೆ.

—ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾ
Book of the year, 1976

"ಅವರು ಅಪಾರ ಪ್ರಾಮಾಣಿಕತೆ ಮತ್ತು ದಯಾಮಯರಾದ ನಿಜ ಪುಣ್ಯಪುರುಷರಾಗಿದ್ದರು ಮತ್ತು ದರ್ಶನ ಪಡೆದವರ ಮೇಲೆ ಅವರು ಪ್ರಬಲ ಪ್ರಭಾವ ಬೀರಿದ್ದರು ... ಅವರು ಎಂದೂ ತಾವು ಅಧಿಕಾರಿಗಳೆಂದು ಹೇಳಲಿಲ್ಲ ಮತ್ತು ಆತ್ಮಪ್ರತಿಷ್ಠೆ ಬಯಸಲಿಲ್ಲ. ಅವರು ಹೇಳಿದುದು ಮತ್ತು ಮಾಡಿದುದು ಎಲ್ಲವೂ ಸದಾ ಕೃಷ್ಣನ ಹೆಸರಿನಲ್ಲಿ ... ಅವರು ಅದ್ಭುತ ವ್ಯಕ್ತಿ ಮತ್ತು ಅವರ ಸಾಧನೆಯೂ ಅದ್ಭುತ."

—ಥಾಮಸ್ ಜೆ. ಹಾಪ್‌ಕಿನ್ಸ್ **Ph. D.**
ಅಧ್ಯಕ್ಷರು, ಧರ್ಮಾಧ್ಯಯನಗಳ ಇಲಾಖೆ
ಫ್ರಾಂಕ್ಲಿನ್ ಮತ್ತು ಮಾರ್ಷಲ್ ಕಾಲೇಜ್ U.S.A

"ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಅಮೂಲ್ಯ ಕಾರ್ಯ ಮಾಡುತ್ತಿದ್ದಾರೆ. ಅವರ ಕೃತಿಗಳು ಮಾನವ ಕುಲದ ಉದ್ಧಾರಕ್ಕೆ ಮಹತ್ವದ ಕೊಡುಗೆಗಳಾಗಿವೆ."

—**ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ**

"ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದ ರಚಿತ ಸುಂದರ ಆವೃತ್ತಿಯಲ್ಲಿ, ಶ್ರೀಮದ್ ಭಾಗವತವನ್ನು ಓದುವುದು ಇತ್ತೀಚಿನ ನನ್ನ ಮಹದಾನಂದದ ಸಂಗತಿಯಾಗಿದೆ. ಸಂಸ್ಕೃತ ಪದ ಮತ್ತು ಅದರ ಬೆಲೆಯುಳ್ಳ ಅರ್ಥದ ಬಗ್ಗೆ ಅವರು ನೀಡಿದ ಗಮನ ಮತ್ತು ಅರ್ಪಣಭಾವವು ಪ್ರತಿಪುಟದಲ್ಲಿ ಎದ್ದುಕಾಣುತ್ತದೆ."

—**ಅಲೆಕ್ಸ್ ವೇಮನ್** Ph.D
ಸಂಸ್ಕೃತ ಪ್ರಾಧ್ಯಾಪಕರು, ಕೊಲಂಬಿಯಾ ವಿಶ್ವವಿದ್ಯಾಲಯ.

"ಈ ಗ್ರಂಥವು ಯು. ಎನ್. ಗ್ರಂಥಾಲಯಕ್ಕೆ ಅಮೂಲ್ಯ ಕೊಡುಗೆ. ಅದು ಅನೇಕ ಏಷಿಯನ್ ರಾಷ್ಟ್ರಗಳ ಸಂಸ್ಕೃತಿಗಳಿಗೆ ಸೇತುವೆ. ಪ್ರಾಚೀನ ಮತ್ತು ಆಧುನಿಕ ಶಾಂತಿದರ್ಶನಗಳ ಅವರ ಸಂವಾದವು ಈ ಸಂಕ್ಷೋಭೆಯ ಕಾಲದಲ್ಲಿ ಅದನ್ನು ವಿಶೇಷ ಉಪಯುಕ್ತ ಕೃತಿಯನ್ನಾಗಿ ಮಾಡುತ್ತದೆ."

—**ವಿನಿಫ್ರೆಡ್ ಐ. ಆಲ್‌ಸನ್**
ಯು. ಎನ್.‌ಗೆ ಜಪಾನಿನ ಕಾಯಂ ನಿಯೋಗಿ.

"ಈ ಮಹಾ ಅಧ್ಯಾತ್ಮ ನಾಯಕರ ಸಂದರ್ಶನಾವಕಾಶ ಪಡೆದುದಕ್ಕೆ ಮತ್ತು ಅವರು ನನಗೆ ಒದಗಿಸಿದ ವ್ಯಕ್ತಿಗತ ಸ್ಫೂರ್ತಿಗೆ ನಾನು ಚಿರಋಣಿ ... ಅವರು ಈ ದೇಶಕ್ಕೆ ತಂದ ಆಂದೋಲನವು ತಲೆತಲಾಂತರ ಮುಂದುವರಿಯುತ್ತದೆ ಮತ್ತು ಈ ಮಹಾ ನಾಯಕರಿಗೆ ಮತ್ತು ಗುರುಗಳಿಗೆ ಇದಕ್ಕಿಂತ ಹೆಚ್ಚಿನ ಸಮುಚಿತ ಪ್ರಶಂಸೆ ಮತ್ತೊಂದಿರಲಾರದು. ಅವರು ನಮ್ಮ ಮಧ್ಯದಲ್ಲಿ ಆಶಾಪೂರ್ಣರಾಗಿ ಬಾಳಿದರು ಮತ್ತು ಅವರ ಚೇತನವು ಇಲ್ಲಿ ಸದಾ ಜೀವಂತ ಎಂದು ತಿಳಿದು ನಾವೆಲ್ಲರೂ ನೆಮ್ಮದಿ ಹೊಂದಬಹುದು."

—**ಜಾಕೇ ವಾಘ್ನ** III
ಮಿಚಿಗನ್ ಸ್ಟೇಟ್ ರೆಪ್ರೆಸೆಂಟೇಟಿವ್. 18ನೆಯ ಜಿಲ್ಲೆ.

॥ ಶ್ರೀ ಶ್ರೀ ಗುರುಗೌರಾಂಗ ಜಯತಃ ॥

# ಜನನ ಮರಣಗಳಾಚೆ

## (Beyond Birth and Death)

ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದ
ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಸ್ಥಾಪನಾಚಾರ್ಯರು

*ಕನ್ನಡ ಅನುವಾದ*

ವಿದ್ಯಾಭೂಷಣ ಶ್ರೀ ಕಂಠೀರಾವ್
ಅಧ್ಯಕ್ಷರು, ಕರ್ನಾಟಕ ರಾಜಭಾಷಾ (ವಿಧಾಯಿ) ಆಯೋಗ
ಕರ್ನಾಟಕ ಸಾಹಿತ್ಯ ಅಕಾದಮಿ ಮತ್ತು ರಾಜ್ಯ ಪ್ರಶಸ್ತಿ ವಿಜೇತರು



ಭಕ್ತಿ ವೇದಾಂತ ಬುಕ್ ಟ್ರಸ್ಟ್ (ಬಿ. ಬಿ. ಟಿ.)
ನ್ಯೂಯಾರ್ಕ್ • ಲಾಸ್‌ಏಂಜಲೀಸ್ • ಲಂಡನ್ • ಬೊಂಬಾಯಿ • ಬೆಂಗಳೂರು

ಈ ಪುಸ್ತಕದ ವಿಷಯದಲ್ಲಿ ಆಸಕ್ತರಾದವರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘದ ಬೆಂಗಳೂರು ಶಾಖೆಯ ಅಧ್ಯಕ್ಷರೊಂದಿಗೆ ಪತ್ರ ವ್ಯವಹಾರ ಮಾಡಬಹುದು.

*ವಿಳಾಸ :*

**ಇಸ್ಕಾನ್ (ISKCON)**

ಹರೇಕೃಷ್ಣ ಹಿಲ್, ರಾಜಾಜಿನಗರ, ಬೆಂಗಳೂರು-560 010

ದೂರವಾಣಿ : 3321956





| | | |
|---|---|---|
| ಮೊದಲನೆಯ ಮುದ್ರಣ | : | 1984 ಪ್ರತಿಗಳು : 5000 |
| ಎರಡನೆಯ ಮುದ್ರಣ | : | 1990 ಪ್ರತಿಗಳು : 4000 |
| ಮೂರನೆಯ ಮುದ್ರಣ | : | 1993 ಪ್ರತಿಗಳು : 5000 |
| ನಾಲ್ಕನೆಯ ಮುದ್ರಣ | : | 1994 ಪ್ರತಿಗಳು : 10,000 |



ಮುದ್ರಕರು :

**THOMSON PRESS (INDIA) LIMITED**

18/35 Delhi - Mathura Road, Faridabad,

Phone No. : 8285521 - 24

Telex : 0343 - 207 THOM IN, Fax : 011-8284511

# ವಿಷಯ ಸೂಚಿ

## ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತಸ್ವಾಮಿ ಪ್ರಭುಪಾದರ ಗ್ರಂಥಗಳು

ಭಗವದ್ಗೀತಾ ಯಥಾರೂಪ

ಶ್ರೀಮದ್ಭಾಗವತಮ್

ಶ್ರೀ ಚೈತನ್ಯ ಚರಿತಾಮೃತ (17 ಸಂಪುಟಗಳು)

ಶ್ರೀ ಚೈತನ್ಯರ ಉಪದೇಶಾಮೃತ

ಭಕ್ತಿರಸಾಮೃತ ಸಿಂಧು

ಉಪದೇಶಾಮೃತ

ಶ್ರೀ ಈಶೋಪನಿಷತ್

ಇತರ ಗ್ರಹಗಳಿಗೆ ಸುಗಮ ಯಾತ್ರೆ

ಕೃಷ್ಣಪ್ರಜ್ಞೆ: ಶ್ರೇಷ್ಠತಮ ಯೋಗಪದ್ಧತಿ

ಕೃಷ್ಣ: ಪರಮ ದೇವೋತ್ತಮ ಪುರುಷ

ಪರ್ಯಾಪ್ತ ಪ್ರಶ್ನೆಗಳು ಮತ್ತು ಪರ್ಯಾಪ್ತ ಉತ್ತರಗಳು

ಪ್ರಹ್ಲಾದ ಮಹಾರಾಜರ ದಿವ್ಯೋಪದೇಶಗಳು

ಕೃಷ್ಣ: ಆನಂದಸಾಗರ

ಜೀವದಿಂದ ಜೀವೋತ್ಪತ್ತಿ

ಯೋಗದ ಪರಿಪೂರ್ಣತೆ

ಜನನ ಮರಣಗಳಾಚೆ

ಕೃಷ್ಣನೆಡೆಗೆ

ರಾಜವಿದ್ಯಾ

ಕೃಷ್ಣಪ್ರಜ್ಞೆಗೆ ಉನ್ನತಿ

ಕೃಷ್ಣಪ್ರಜ್ಞೆ—ಅನುಪಮ ಕೊಡುಗೆ

ದೇವಹೂತಿ ಪುತ್ರ ಶ್ರೀ ಕಪಿಲನ ಉಪದೇಶಗಳು

ಆತ್ಮಸಾಕ್ಷಾತ್ಕಾರ ವಿಜ್ಞಾನ

# ನಾವು ಈ ದೇಹಗಳಲ್ಲ

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥**

"ಹೇ ಭರತ ವಂಶಜನೇ, ದೇಹದಲ್ಲಿ ವಾಸಿಸುತ್ತಿರುವವನು ಎಂದೂ ಕೊಲ್ಲಲ್ಪಡಲಾರನು. ಆದ್ದರಿಂದ ನೀನು ಯಾವ ಜೀವಿಯ ಸಲುವಾಗಿಯೂ ವಿಷಾದಿಸಬೇಕಾಗಿಲ್ಲ (ಭ.ಗೀ. 2.30)."

ಒಬ್ಬನ ವ್ಯಕ್ತಿತ್ವವು ದೇಹದಿಂದ ಪ್ರತ್ಯೇಕವಾದುದು ಎಂದು ಅರಿತುಕೊಳ್ಳುವುದು ಆತ್ಮಸಾಕ್ಷಾತ್ಕಾರದ ಪ್ರಥಮ ಹೆಜ್ಜೆ. ಮರಣವನ್ನು ದಾಟಿ ಆಚೆಗಿರುವ ಅಧ್ಯಾತ್ಮ ಜಗತ್ತನ್ನು ಪ್ರವೇಶಿಸಬಯಸುವವನಿಗೆ "ನಾನು ಈ ದೇಹವಲ್ಲ, ಆದರೆ ಚೇತನಾತ್ಮನು" ಎಂಬುದು ಅವಶ್ಯವಾದ ಸಾಕ್ಷಾತ್ಕಾರ. ಇದು "ನಾನು ಈ ದೇಹವಲ್ಲ" ಎಂದು ಹೇಳುವಷ್ಟು ಸರಳ ವಿಷಯವಲ್ಲ. ಆದರೆ ವಾಸ್ತವಿಕವಾಗಿ ಅದರ ಸಾಕ್ಷಾತ್ಕಾರವಾಗಬೇಕು. ಇದು ಮೊದಲ ನೋಟಕ್ಕೆ ಕಾಣಬಹುದಾದಷ್ಟು ಸರಳವಾಗಿಲ್ಲ. ನಾವು ಈ ದೇಹಗಳಲ್ಲದೆ, ಶುದ್ಧಪ್ರಜ್ಞೆಯಾಗಿದ್ದರೂ ಹೇಗೋ ಎಂತೋ, ನಾವು ದೈಹಿಕ ಉಡುಪಿನಲ್ಲಿ ಬಂಧಿತರಾಗಿದ್ದೇವೆ. ಮರಣವನ್ನು ದಾಟಿದ ಸುಖ ಮತ್ತು ಸ್ವಾತಂತ್ರ್ಯವನ್ನು ನಾವು ವಾಸ್ತವಿಕವಾಗಿ ಬಯಸುವುದಾದರೆ, ನಾವು ಶುದ್ಧಪ್ರಜ್ಞೆಯಾಗಿ ನಮ್ಮ ಸ್ವರೂಪ ಸ್ಥಿತಿಯಲ್ಲಿ ನಮ್ಮನ್ನು ಸ್ಥಾಪಿಸಿಕೊಂಡು ಅಲ್ಲಿ ಉಳಿಯಬೇಕು.

ದೈಹಿಕ ಕಲ್ಪನೆಯಲ್ಲಿ ಜೀವಿಸುತ್ತಾ, ನಮ್ಮ ಸುಖದ ವಿಚಾರವು ಭ್ರಮೆಯಲ್ಲಿರುವ ಮಾನವನಂತಾಗಿದೆ. ದೇಹದೊಂದಿಗೆ ಗುರುತಿಸಿಕೊಳ್ಳುವ ಈ ಭ್ರಾಮಕ ಸ್ಥಿತಿಯನ್ನು ಎಲ್ಲಾ ಕಾರ್ಯದಿಂದ ವಿರಮಿಸುವ ಮೂಲಕ ಸರಿಪಡಿಸಿಕೊಳ್ಳಬೇಕೆಂದು ಕೆಲವು ದಾರ್ಶನಿಕರು ಹೇಳುತ್ತಾರೆ. ಈ ಭೌತಿಕ ಚಟುವಟಿಕೆಗಳು ನಮಗೆ ದುಃಖಮೂಲವಾಗಿರುವುದರಿಂದ, ನಾವು ವಾಸ್ತವಿಕವಾಗಿ ಈ ಚಟುವಟಿಕೆಗಳನ್ನು ನಿಲ್ಲಿಸಬೇಕೆಂದು ಅವರು ಹೇಳುತ್ತಾರೆ. ಅವರ ಪರಿಪೂರ್ಣತೆಯ ಪರ್ಯವಸಾನವು ಯಾವ ಚಟುವಟಿಕೆಗಳೂ ನಡೆಯದಿರುವ ಬೌದ್ಧ ನಿರ್ವಾಣದ ಬಗೆಯದಾಗಿದೆ.

ಭೌತಿಕ ವಸ್ತುಗಳ ಸಂಯೋಜನೆಯ ನಿಮಿತ್ತ, ಈ ದೇಹವು ಅಸ್ತಿತ್ವಕ್ಕೆ ಬಂದಿದೆ ಮತ್ತು ಹೇಗೋ ಏನೋ ಈ ಭೌತಿಕ ದ್ರವ್ಯಗಳನ್ನು ಪ್ರತ್ಯೇಕಿಸಿದರೆ ಅಥವಾ ನಷ್ಟಗೊಳಿಸಿದರೆ ದುಃಖ ಕಾರಣವು ನಿವಾರಿತವಾಗುತ್ತದೆ ಎಂದು ಬುದ್ಧನು ಸಾರಿದನು. ನಾವು ದೊಡ್ಡ ಮನೆ ಹೊಂದಿದ್ದ ಕಾರಣ ತೆರಿಗೆ ವಸೂಲು ಮಾಡುವವನು ನಮಗೆ ತುಂಬಾ ಕಷ್ಟಕೊಡುತ್ತಿದ್ದರೆ, ಆ ಮನೆಯನ್ನು ನಾಶಪಡಿಸುವುದು ಒಂದು ಸುಲಭ ಉಪಾಯ. ಆದರೆ ಈ ಭೌತಿಕ ದೇಹವೇ ಸರ್ವಸ್ವವಲ್ಲ ಎಂದು ಭಗವದ್ಗೀತೆಯು ಸೂಚಿಸುತ್ತದೆ. ಈ ಭೌತಿಕ ದ್ರವ್ಯಗಳ ಸಂಯೋಜನೆಯ ಆಚೆಗೆ ಚೇತನವಿದೆ ಮತ್ತು ಆ ಚೇತನದ ಸಂಕೇತವು ಪ್ರಜ್ಞೆಯಾಗಿದೆ.

ಪ್ರಜ್ಞೆಯನ್ನು ನಿರಾಕರಿಸಲಾಗದು. ಪ್ರಜ್ಞಾರಹಿತ ದೇಹವು ಮೃತದೇಹ. ದೇಹದಿಂದ ಪ್ರಜ್ಞೆಯನ್ನು ನಿವಾರಿಸಿದೊಡನೆಯೇ, ಮಾತು ಹೊರಡುವುದಿಲ್ಲ, ಕಣ್ಣು ನೋಡುವುದಿಲ್ಲ ಅಥವಾ ಕಿವಿಗಳು ಕೇಳುವುದಿಲ್ಲ. ಒಂದು ಮಗು ಕೂಡ ಇದನ್ನು ಅರಿತುಕೊಳ್ಳಬಹುದು. ದೇಹದ ಚಲನಕ್ಕೆ ಪ್ರಜ್ಞೆಯು ಅನನ್ಯವಾಗಿ ಅವಶ್ಯಕ ಎಂಬುದು ಸತ್ಯಸಂಗತಿ. ಈ ಪ್ರಜ್ಞೆ ಏನು? ಶಾಖ ಅಥವಾ ಧೂಮ ಅಗ್ನಿಯ ಸಂಕೇತಗಳಾಗಿರುವಂತೆ, ಪ್ರಜ್ಞೆಯು ಆತ್ಮನ ಸಂಕೇತ. ಆತ್ಮನ ಶಕ್ತಿಯು ಪ್ರಜ್ಞಾ ರೂಪದಲ್ಲಿ ಉತ್ಪನ್ನ. ನಿಜವಾಗಿ ಆತ್ಮ ಇದೆ ಎಂಬುದನ್ನು ಪ್ರಜ್ಞೆಯು ರುಜುವಾತುಪಡಿಸುತ್ತದೆ. ಇದು ಭಗವದ್ಗೀತೆಯ ದರ್ಶನವಷ್ಟೇ ಅಲ್ಲ, ಸಕಲ ವೇದ ಸಾಹಿತ್ಯದ ಸಿದ್ಧಾಂತ.

ಶಂಕರಾಚಾರ್ಯರ ವ್ಯಕ್ತಿಶೂನ್ಯ ಪಂಥದವರೂ ಮತ್ತು ಶ್ರೀಕೃಷ್ಣನಿಂದ ಬಂದ ಪರಂಪರೆಯನ್ನು ಅನುಸರಿಸುವ ವೈಷ್ಣವರೂ ಆತ್ಮನ ವಾಸ್ತವಿಕ ಅಸ್ತಿತ್ವವನ್ನು ಒಪ್ಪಿಕೊಳ್ಳುತ್ತಾರೆ, ಆದರೆ ಬೌದ್ಧ ದಾರ್ಶನಿಕರು ಹಾಗೆ ಒಪ್ಪಿಕೊಳ್ಳುವುದಿಲ್ಲ. ಒಂದು ವಿಶಿಷ್ಟ ಘಟ್ಟದಲ್ಲಿ ಜಡ ಸಂಯೋಜನೆಯು ಪ್ರಜ್ಞೆಯನ್ನು ಉತ್ಪನ್ನ ಮಾಡುತ್ತದೆ ಎಂದು ಬೌದ್ಧರು ವಾದಿಸುತ್ತಾರೆ. ಆದರೆ ನಮ್ಮ ವಶಾವರ್ತಿ ಎಲ್ಲ ಜಡ ಘಟಕಗಳನ್ನು ನಾವು ಹೊಂದಿರಬಹುದಾಗಿದ್ದರೂ ಅವುಗಳಿಂದ ನಾವು ಪ್ರಜ್ಞೆಯನ್ನು ಉತ್ಪತ್ತಿ ಮಾಡಲಾರೆವು ಎಂಬ ಸತ್ಯದಿಂದ ಈ ವಾದವು ನಿರಾಕೃತವಾಗುತ್ತದೆ. ಮೃತ ಮನುಷ್ಯನಲ್ಲಿ ಎಲ್ಲ ಭೌತಿಕ ದ್ರವ್ಯಗಳು ಇರಬಹುದು, ಆದರೆ ಆ ಮನುಷ್ಯನಲ್ಲಿ ನಾವು ಪ್ರಜ್ಞೆಯನ್ನು ಉಜ್ಜೀವಿಸಲಾರೆವು. ಈ ದೇಹವು ಯಂತ್ರದಂತಲ್ಲ. ಯಂತ್ರದ ಒಂದು ಭಾಗವು ಕೆಟ್ಟುಹೋದಾಗ ಮತ್ತೊಂದನ್ನು ಜೋಡಿಸಿದಾಗ ಆ ಯಂತ್ರವು ಮತ್ತೆ ಕಾರ್ಯಾರಂಭಿಸುತ್ತದೆ. ಆದರೆ ದೇಹವು ವಿಫಲವಾಗಿ ಪ್ರಜ್ಞೆಯು ದೇಹವನ್ನು ಬಿಟ್ಟಾಗ ನಾವು ಆ ವಿಫಲಗೊಂಡ ಭಾಗದ ಬದಲು ಮತ್ತೊಂದನ್ನು ಸೇರಿಸುವ

ಮತ್ತು ಪ್ರಜ್ಞೆಯನ್ನು ಪುನರುಜ್ಜೀವಿಸುವ ಸಂಭವವಿಲ್ಲ. ಆತ್ಮವು ದೇಹದಿಂದ ಭಿನ್ನ ಮತ್ತು ಆತ್ಮವು ಅಲ್ಲಿರುವವರೆಗೆ ದೇಹವು ಕ್ರಿಯಾಶೀಲವಾಗಿರುತ್ತದೆ. ಆದರೆ ಆತ್ಮನಿಲ್ಲದಾಗ ಆ ದೇಹವನ್ನು ಕ್ರಿಯಾಶೀಲಗೊಳಿಸುವುದು ಅಸಾಧ್ಯ.

ನಾವು ನಮ್ಮ ಜಡ ಇಂದ್ರಿಯಗಳಿಂದ ಆತ್ಮನನ್ನು ಕಾಣಲಾರೆವು. ಆದ್ದರಿಂದ ನಾವು ಅದನ್ನು ನಿರಾಕರಿಸುತ್ತೇವೆ. ವಾಸ್ತವಿಕವಾಗಿ ನಾವು ಕಾಣಲಾಗದ ಅದೆಷ್ಟೋ ವಸ್ತುಗಳು ಇವೆ. ನಾವು ಗಾಳಿಯನ್ನು, ರೇಡಿಯೋ ತರಂಗಗಳನ್ನು ಅಥವಾ ಧ್ವನಿಯನ್ನು ಕಾಣಲಾರೆವು ಅಥವಾ ನಮ್ಮ ಜಡ ಇಂದ್ರಿಯಗಳಿಂದ ಅತಿ ಸೂಕ್ಷ್ಮ ಕ್ರಿಮಿಗಳನ್ನು ಕಾಣಲಾರೆವು. ಆದರೆ ಹಾಗೆಂದ ಮಾತ್ರದಿಂದ ಅವು ಇಲ್ಲ ಎಂದು ಅರ್ಥವಲ್ಲ. ಸೂಕ್ಷ್ಮದರ್ಶಕ ಮತ್ತು ಇತರ ಸಾಧನಗಳ ಸಹಾಯದ ಮೂಲಕ ಹಿಂದೆ ಅಪರಿಪೂರ್ಣ ಇಂದ್ರಿಯಗಳಿಂದ ನಿರಾಕೃತವಾಗಿದ್ದ ಅನೇಕ ವಸ್ತುಗಳನ್ನು ಕಾಣಬಹುದಾಗಿದೆ. ಗಾತ್ರದಲ್ಲಿ ಅಣುವಿನಂತಿರುವ ಆತ್ಮನನ್ನು ಈವರೆಗೆ ಇಂದ್ರಿಯಗಳಿಂದ ಅಥವಾ ಯಂತ್ರಸಾಧನಗಳಿಂದ ಕಾಣಲಾಗದ ಮಾತ್ರದಿಂದ ಅದು ಇಲ್ಲವೆಂದು ನಾವು ನಿರ್ಣಯಿಸಕೂಡದು. ಆದರೆ ಅದು ಸಂಕೇತಗಳಿಂದ ಮತ್ತು ಪರಿಣಾಮಗಳಿಂದ ಕಾಣಲ್ಪಡಬಹುದು.

ಭಗವದ್ಗೀತೆಯಲ್ಲಿ ನಮ್ಮ ಎಲ್ಲ ಕ್ಲೇಶಗಳು ದೇಹದೊಂದಿಗೆ ಮಿಥ್ಯಾ ಗುರುತಿಸುವಿಕೆಯ ನಿಮಿತ್ತ ಎಂದು ಶ್ರೀಕೃಷ್ಣನು ಹೇಳುತ್ತಾನೆ.

**ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥**

"ಹೇ ಕುಂತೀಪುತ್ರನೇ, ಸುಖದುಃಖಗಳ ಅಶಾಶ್ವತ ಕಾಣಿಸಿಕೊಳ್ಳುವಿಕೆ, ಕಾಲಕ್ರಮದಲ್ಲಿ ಅವುಗಳ ಮರೆಯಾಗುವಿಕೆ, ಚಳಿ ಬೇಸಿಗೆ ಕಾಲಗಳ ಬರಹೋಗುವಿಕೆಯಂತೆ. ಹೇ ಭರತ ವಂಶಜನೇ, ಅವು ಇಂದ್ರಿಯ ಅನುಭವದಿಂದ ಉಂಟಾಗುತ್ತವೆ ಮತ್ತು ಕ್ಷೋಭೆಗೊಳ್ಳದೆ ಅವುಗಳನ್ನು ಸಹಿಸಿಕೊಳ್ಳಲು ಕಲಿಯಬೇಕು" (ಭ. ಗೀ. 2.14).

ಬೇಸಿಗೆ ಕಾಲದಲ್ಲಿ ನೀರಿನ ಸಂಪರ್ಕದಿಂದ ನಾವು ಸುಖ ಅನುಭವಿಸಬಹುದು. ಆದರೆ ಚಳಿಗಾಲದಲ್ಲಿ ಅತಿ ಶೀತವಾಗಿರುವುದರಿಂದ ನಾವು ಅದೇ ನೀರನ್ನು ಮುಟ್ಟದೆ ಇರಬಹುದು. ಉಭಯ ಪ್ರಸಂಗಗಳಲ್ಲಿ ನೀರು ಒಂದೇ. ಆದರೆ ದೇಹದೊಂದಿಗೆ ಅದರ ಸಂಪರ್ಕ ನಿಮಿತ್ತ ನಾವು ಅದನ್ನು ಹಿತಕರ ಅಥವಾ ಅಹಿತಕರವಾಗಿ ಕಾಣುತ್ತೇವೆ. ಎಲ್ಲ ಸುಖದುಃಖಗಳ ಭಾವನೆಗಳು ದೇಹ ನಿಮಿತ್ತವಾದವವು.

ಕೆಲವೊಂದು ಸ್ಥಿತಿಗಳಲ್ಲಿ ದೇಹ ಮನಸ್ಸುಗಳು ಸುಖ ಮತ್ತು ದುಃಖವನ್ನು ಅನುಭವಿಸುತ್ತವೆ. ವಾಸ್ತವಿಕವಾಗಿ ನಾವು ಸುಖವನ್ನು ಬೆನ್ನಟ್ಟಿದ್ದೇವೆ, ಏಕೆಂದರೆ ಆತ್ಮನ ಸ್ವರೂಪಸ್ಥಿತಿಯು ಸುಖದ್ದು, ಆತ್ಮವು ಸಚ್ಚಿದಾನಂದ ವಿಗ್ರಹ – ನಿತ್ಯ ಜ್ಞಾನಾನಂದ ದೇಹಿಯಾದ, ಪರಮಚೇತನನ ವಿಭಿನ್ನಾಂಶ. ನಿಜವಾಗಿ ಯಾವ ಮತಕ್ಕೂ ಸೇರದ ಕೃಷ್ಣ ನಾಮದ ಅರ್ಥವೆಂದರೆ "ಪರಮ ಆನಂದ" ಎಂದು. ಕೃಷ್ ಎಂದರೆ ಅತ್ಯಧಿಕ ಮತ್ತು ಣ ಎಂದರೆ ಆನಂದ. ಕೃಷ್ಣನು ಆನಂದ ಸಂಗ್ರಹ ಮತ್ತು ಅವನ ವಿಭಿನ್ನಾಂಶರಾಗಿರುವುದರಿಂದ ನಮಗೆ ಆನಂದದ ತೃಷೆ ಇದೆ. ಸಾಗರ ಜಲದ ಒಂದು ಹನಿಯು ಸ್ವಯಂ ಸಾಗರದ ಸಕಲ ಗುಣಗಳನ್ನು ಹೊಂದಿದೆ ಮತ್ತು ನಾವು ಪರಮ ಸಮಗ್ರದ ಸೂಕ್ಷ್ಮ ಕಣಗಳಾಗಿದ್ದರೂ ಪರಮ ಪ್ರಭುವಿನ ಅದೇ ಶಕ್ತಿಮಾನ್ ಗುಣಗಳನ್ನು ಹೊಂದಿದ್ದೇವೆ.

ಅಣು ಆತ್ಮವು ಅಷ್ಟು ಚಿಕ್ಕದಾಗಿದ್ದರೂ ಎಷ್ಟೊಂದು ಅದ್ಭುತ ರೀತಿಗಳಲ್ಲಿ ಕೆಲಸಮಾಡಲು ಇಡೀ ದೇಹವನ್ನು ಚಲಿಸುತ್ತದೆ. ಜಗತ್ತಿನಲ್ಲಿ ನಾವು ಎಷ್ಟೋ ನಗರಗಳನ್ನು, ಹೆದ್ದಾರಿಗಳನ್ನು, ಸೇತುವೆಗಳನ್ನು, ದೊಡ್ಡ ಕಟ್ಟಡಗಳನ್ನು, ಸ್ಮಾರಕಗಳನ್ನು, ಮಹಾ ನಾಗರಿಕತೆಗಳನ್ನು ಕಾಣುತ್ತೇವೆ. ಆದರೆ ಇವೆಲ್ಲವುಗಳನ್ನು ಯಾರು ಮಾಡಿದ್ದಾರೆ? ಅವೆಲ್ಲವೂ ದೇಹದೊಳಗಿರುವ ಸೂಕ್ಷ್ಮ ಚೇತನ ಕಣದಿಂದ ಮಾಡಲ್ಪಟ್ಟಿವೆ. ಅಂತಹ ಅದ್ಭುತ ಕಾರ್ಯಗಳು ಸೂಕ್ಷ್ಮ ಚೇತನ ಕಣಗಳಿಂದ ನಿರ್ವಹಿಸಲ್ಪಡುವುದಾದರೆ, ಪರಮ ಸಮಗ್ರ ಪರಮ ಚೇತನನಿಂದ ಏನು ಸಾಧಿಸಲ್ಪಡುವುದು ಎಂಬ ಊಹೆಯನ್ನು ನಾವು ಮಾಡಲಾಗದು. ಸೂಕ್ಷ್ಮ ಚೇತನ ಕಣದ ಸ್ವಾಭಾವಿಕ ಹಂಬಲಿಕೆಯು ಸಮಗ್ರದ ಜ್ಞಾನ, ಆನಂದ ಮತ್ತು ಶಾಶ್ವತತೆಯ ಗುಣಗಳಿಗಾಗಿ ಇದೆ. ಆದರೆ ಈ ಹಂಬಲಿಕೆಗಳು ಭೌತಿಕ ದೇಹದ ನಿಮಿತ್ತ ಭಗ್ನಗೊಳ್ಳುತ್ತವೆ. ಆತ್ಮನ ಇಚ್ಛೆಯನ್ನು ಹೇಗೆ ಈಡೇರಿಸಿಕೊಳ್ಳಬೇಕು ಎಂಬ ಮಾಹಿತಿಯನ್ನು ಭಗವದ್ಗೀತೆಯಲ್ಲಿ ನೀಡಲಾಗಿದೆ.

ಸದ್ಯ ನಾವು ಅಪರಿಪೂರ್ಣ ಸಾಧನಗಳ ಮೂಲಕ ನಿತ್ಯ ಜ್ಞಾನಾನಂದವನ್ನು ಪಡೆಯಲೆತ್ನಿಸುತ್ತಿದ್ದೇವೆ. ವಾಸ್ತವಿಕವಾಗಿ ಈ ಧ್ಯೇಯಗಳ ಕಡೆಗೆ ನಮ್ಮ ಪ್ರಗತಿಯು ಭೌತಿಕ ದೇಹದಿಂದ ತಡೆಗಟ್ಟಲ್ಪಟ್ಟಿದೆ; ಆದ್ದರಿಂದ ನಾವು ದೇಹಾತೀತವಾದ ನಮ್ಮ ಅಸ್ತಿತ್ವದ ಸಾಕ್ಷಾತ್ಕಾರಕ್ಕೆ ಬರಬೇಕು. ನಾವು ಈ ದೇಹಗಳಲ್ಲ ಎಂಬ ತಾತ್ತ್ವಿಕ ಜ್ಞಾನವು ಸಾಲದು. ನಾವು ಸದಾ ನಮ್ಮನ್ನು ದೇಹದ ಒಡೆಯರನ್ನಾಗಿ ಪ್ರತ್ಯೇಕವಾಗಿರಿಸಿಕೊಳ್ಳಬೇಕು, ಸೇವಕರಾಗಿಯಲ್ಲ. ಕಾರನ್ನು ಹೇಗೆ ಚೆನ್ನಾಗಿ

ಓಡಿಸಬೇಕು ಎಂಬುದನ್ನು ನಾವು ತಿಳಿದಿದ್ದರೆ ಅದು ನಮಗೆ ಉಪಯೋಗಕ್ಕೆ ಬರುತ್ತದೆ; ಆದರೆ ಅದು ನಮಗೆ ಗೊತ್ತಿರದಿದ್ದರೆ ನಮಗೆ ಅಪಾಯವುಂಟು.

ದೇಹವು ಇಂದ್ರಿಯಗಳಿಂದ ಕೂಡಿದೆ ಮತ್ತು ಇಂದ್ರಿಯಗಳು ಸದಾ ತಮ್ಮ ವಿಷಯಗಳ ಹಸಿವು ಹೊಂದಿರುತ್ತವೆ. ಕಣ್ಣುಗಳು ಸುಂದರ ವ್ಯಕ್ತಿಯನ್ನು ಕಂಡು ನಮಗೆ "ಓಹೋ, ಅಲ್ಲಿ ಒಬ್ಬ ಸುಂದರ ಹುಡುಗಿ, ಸುಂದರ ಹುಡುಗನಿದ್ದಾನೆ. ಅಲ್ಲಿ ಹೋಗಿ ನೋಡೋಣ" ಎಂದು ಹೇಳುತ್ತವೆ. ಕಿವಿಗಳು "ಅಲ್ಲಿ ಸೊಗಸಾದ ಸಂಗೀತ ನಡೆಯುತ್ತಿದೆ, ಹೋಗಿ ಕೇಳೋಣ" ಎಂದು ನಮಗೆ ಹೇಳುತ್ತವೆ. ನಾಲಿಗೆಯು, "ಓಹೋ, ಅಲ್ಲಿ ಬಹು ರುಚಿಕರ ತಿಂಡಿಗಳ ಉಪಾಹಾರ ಗೃಹ ಇದೆ, ಹೋಗೋಣ" ಎಂದು ಹೇಳುತ್ತದೆ. ಈ ರೀತಿಯಲ್ಲಿ ಇಂದ್ರಿಯಗಳು ನಮ್ಮನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಎಳೆದೊಯ್ಯುತ್ತವೆ ಮತ್ತು ಇದರಿಂದಾಗಿ ನಾವು ಗೊಂದಲಕ್ಕೀಡಾಗುತ್ತೇವೆ.

**ಇನ್ದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ॥**

"ನೀರಿನ ಮೇಲಿನ ದೋಣಿಯೊಂದು ಬಲವಾದ ಗಾಳಿಯಿಂದ ಎಳೆದೊಯ್ಯಲ್ಪಡುವಂತೆ, ಅಲೆಯುತ್ತಿರುವ ಇಂದ್ರಿಯಗಳಲ್ಲಿ ಒಂದರ ಮೇಲೆ ಕೇಂದ್ರೀಕರಿಸಿದರೂ ಮನಸ್ಸು, ಮನುಷ್ಯನೊಬ್ಬನ ಬುದ್ಧಿಯನ್ನು ಎಳೆದೊಯ್ಯಬಲ್ಲದು" (ಭ. ಗೀ. 2.67).

ಇಂದ್ರಿಯಗಳನ್ನು ಹೇಗೆ ನಿಗ್ರಹಿಸಬೇಕು ಎಂಬುದನ್ನು ನಾವು ಕಲಿಯಬೇಕಾದುದು ಅಗತ್ಯ. ಇಂದ್ರಿಯಗಳನ್ನು ಹೇಗೆ ಸ್ವಾಧೀನದಲ್ಲಿಟ್ಟುಕೊಳ್ಳಬೇಕು ಎಂಬುದನ್ನು ತಿಳಿದವನಿಗೆ **ಗೋಸ್ವಾಮಿ** ಎಂಬ ಹೆಸರನ್ನು ನೀಡಲಾಗಿದೆ. **ಗೋ** ಎಂದರೆ ಇಂದ್ರಿಯಗಳು, **ಸ್ವಾಮಿ** ಎಂದರೆ ನಿಯಂತ್ರಕ, ಆದ್ದರಿಂದ ಇಂದ್ರಿಯಗಳನ್ನು ನಿಯಂತ್ರಿಸಬಲ್ಲವನನ್ನು **ಗೋಸ್ವಾಮಿ** ಎಂದು ಪರಿಗಣಿಸಲಾಗಿದೆ. ಮಾಯಾ ಭೌತಿಕ ದೇಹದೊಂದಿಗೆ ತನ್ನನ್ನು ಗುರುತಿಸಿಕೊಳ್ಳುವವನು ತನ್ನನ್ನು ಚೇತನಾತ್ಮಕನಾಗಿ ತನ್ನ ನಿಜ ವ್ಯಕ್ತಿತ್ವವನ್ನು ಸ್ಥಾಪಿಸಿಕೊಳ್ಳಲಾರನೆಂದು ಕೃಷ್ಣನು ಸೂಚಿಸುತ್ತಾನೆ. ದೈಹಿಕ ಸುಖವು ಚಂಚಲ ಮತ್ತು ಮಾದಕ ಮತ್ತು ಅದರ ಅನಿತ್ಯ ಸ್ವಭಾವದ ನಿಮಿತ್ತ ನಾವು ಅದನ್ನು ವಾಸ್ತವಿಕವಾಗಿ ಭೋಗಿಸಲಾರೆವು. ನಿಜವಾದ ಸುಖವು ಆತ್ಮನದು,

ದೇಹದ್ದಲ್ಲ. ದೈಹಿಕ ಸುಖಗಳಿಂದ ವಿಚಲಿತರಾಗದಂತೆ ನಾವು ನಮ್ಮ ಜೀವನಗಳನ್ನು ರೂಪಿಸಿಕೊಳ್ಳಬೇಕು. ಹೇಗೋ ನಾವು ವಿಚಲಿತರಾದರೆ, ನಮ್ಮ ಪ್ರಜ್ಞೆಯನ್ನು ದೇಹಾತೀತ ನಿಜ ವ್ಯಕ್ತಿತ್ವದಲ್ಲಿ ಸ್ಥಾಪಿಸಿಕೊಳ್ಳುವುದು ನಮಗೆ ಅಸಂಭವ.

**ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ, ಬುದ್ಧಿಃ ಸಮಾಧೌ ನ ವಿಧೀಯತೇ ॥**

**ತ್ರೈ ಗುಣ್ಯ ವಿಷಯಾ ವೇದಾ ನಿಸ್ತ್ರೈ ಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವ ಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

"ಇಂದ್ರಿಯಭೋಗ ಮತ್ತು ಭೌತಿಕ ಸಂಪತ್ತಿಗೆ ಅತ್ಯಾಸಕ್ತರಾದವರ ಮನದಲ್ಲಿ ಮತ್ತು ಇಂತಹ ವಸ್ತುಗಳಿಂದ ದಿಗ್ಭ್ರಮೆಗೊಂಡವರಿಗೆ ಪರಮಪ್ರಭುವಿನ ಭಕ್ತಿಯುತ ಸೇವೆಯಲ್ಲಿ ದೃಢನಿಶ್ಚಯವು ಉಂಟಾಗುವುದಿಲ್ಲ."

'ವೇದಗಳು ಮುಖ್ಯವಾಗಿ ಭೌತಿಕ ಪ್ರಕೃತಿಯ ಮೂರು ಗುಣಗಳನ್ನು ಕುರಿತು ವಿವೇಚಿಸುತ್ತವೆ. ಹೇ ಅರ್ಜುನ, ಪ್ರಕೃತಿಯ ಮೂರು ಗುಣಗಳಿಗೆ ಅತೀತನಾಗು. ಎಲ್ಲ ದ್ವಂದ್ವಗಳಿಂದಲೂ ಲಾಭ ಮತ್ತು ರಕ್ಷಣೆಯ ಆತಂಕಗಳಿಂದಲೂ ಮುಕ್ತನಾಗು ಮತ್ತು ಆತ್ಮನಲ್ಲಿ ಸ್ಥಿತನಾಗು" (ಭ. ಗೀ. 2.44, 45).

ವೇದ ಎಂದರೆ ಜ್ಞಾನದ ಗ್ರಂಥ. ಅನೇಕ ಜ್ಞಾನಗ್ರಂಥಗಳಿವೆ. ದೇಶ, ಜನ, ಪರಿಸರ ಇತ್ಯಾದಿಗಳ ಪ್ರಕಾರ ಅವು ವಿವಿಧವಾಗಿವೆ. ಭಾರತದಲ್ಲಿ ಜ್ಞಾನ ಗ್ರಂಥಗಳನ್ನು ವೇದಗಳೆಂದು ಉಲ್ಲೇಖಿಸಲಾಗಿದೆ. ಪಶ್ಚಿಮದಲ್ಲಿ ಅವನ್ನು ಓಲ್ಡ್ ಟೆಸ್ಟಮೆಂಟ್ ಮತ್ತು ನ್ಯೂ ಟೆಸ್ಟಮೆಂಟ್ ಎಂದು ಕರೆಯಲಾಗಿದೆ. ಮಹಮ್ಮದೀಯರು ಕುರಾನ್ ಗ್ರಂಥವನ್ನು ಅಂಗೀಕರಿಸುತ್ತಾರೆ. ಈ ಎಲ್ಲ ಜ್ಞಾನ ಗ್ರಂಥಗಳ ಉದ್ದೇಶವೇನು? ಶುದ್ಧಾತ್ಮರಾಗಿ ನಮ್ಮ ಸ್ವರೂಪವನ್ನು ಅರಿತುಕೊಳ್ಳಲು ನಮಗೆ ತರಬೇತಿ ನೀಡಲು ಅವುಗಳಿವೆ. ಕೆಲವೊಂದು ನಿಯಮ ನಿಯಂತ್ರಣಗಳಿಂದ ದೈಹಿಕ ಚಟುವಟಿಕೆಗಳನ್ನು ನಿರ್ಬಂಧಿಸುವುದು ಅವುಗಳ ಉದ್ದೇಶ ಮತ್ತು ಈ ನಿಯಮ ನಿಯಂತ್ರಣಗಳನ್ನು ನೀತಿ ಸಂಹಿತೆಗಳೆಂದು ತಿಳಿಯಲಾಗಿದೆ. ಉದಾಹರಣೆಗೆ ಬೈಬಲ್, ನಮ್ಮ ಜೀವನಗಳನ್ನು ನಿಯಂತ್ರಿಸಲು ಉದ್ದೇಶಿತ ದಶಾದೇಶಗಳನ್ನು ಹೊಂದಿದೆ. ನಾವು ಅತ್ಯುನ್ನತ ಸಿದ್ಧಿಯನ್ನು ತಲುಪಲೋಸುಗ ದೇಹವನ್ನು ನಿಯಂತ್ರಿಸಬೇಕು ಮತ್ತು ನಿಯಂತ್ರಣ ತತ್ತ್ವಗಳಿಲ್ಲದೆ ನಮ್ಮ ಜೀವನಗಳನ್ನು ಪರಿಪೂರ್ಣಗೊಳಿಸಿಕೊಳ್ಳುವುದು ಅಸಂಭವ. ನಿಯಂತ್ರಿತ ತತ್ತ್ವಗಳು ದೇಶದಿಂದ ದೇಶಕ್ಕೆ ಅಥವಾ ಶಾಸ್ತ್ರದಿಂದ ಶಾಸ್ತ್ರಕ್ಕೆ ಭಿನ್ನ ಭಿನ್ನವಾಗಿರಬಹುದು. ಆದರೆ ಅದು ಮಹತ್ವದ್ದಲ್ಲ. ಏಕೆಂದರೆ ಅವು ಕಾಲ ಮತ್ತು

ಸನ್ನಿವೇಶಗಳು ಮತ್ತು ಜನರ ಮನೋಭೂಮಿಕೆಗನುಸಾರವಾಗಿ ರಚಿತವಾಗಿದೆ. ಆದರೆ ನಿಯಂತ್ರಿತ ನಿಯಂತ್ರಣದ ತತ್ತ್ವವು ಒಂದೇ. ಅದೇ ಪ್ರಕಾರ ಸರಕಾರವು ತನ್ನ ಪ್ರಜೆಗಳಿಂದ ಪಾಲಿಸಲ್ಪಡಬೇಕಾದ ಕೆಲವೊಂದು ನಿಯಂತ್ರಣಗಳನ್ನು ವಿಧಿಸುತ್ತದೆ. ಸರಕಾರದಲ್ಲಾಗಲೀ ಅಥವಾ ನಾಗರಿಕತೆಯಲ್ಲಾಗಲೀ ಯಾವುದೇ ನಿಯಂತ್ರಣಗಳಿಲ್ಲದೆ ಅಭಿವೃದ್ಧಿ ಸಾಧಿಸುವುದು ಅಸಂಭವ. ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನು ವೇದಗಳ ನಿಯಂತ್ರಣ ತತ್ತ್ವಗಳು ಭೌತಿಕ ಪ್ರಕೃತಿಯ ಸತ್ವ, ರಾಜಸ ಮತ್ತು ತಾಮಸವೆಂಬ ಮೂರು ಗುಣಗಳನ್ನು (ತ್ರೈಗುಣ್ಯ ವಿಷಯಾ ವೇದಾ) ನಿಯಂತ್ರಿಸಲು ಉದ್ದಿಷ್ಟವಾಗಿದೆ ಎಂದು ಹೇಳುತ್ತಾನೆ. ಆದರೆ, ಅರ್ಜುನನು ಭೌತಿಕ ಪ್ರಕೃತಿಯ ದ್ವಂದ್ವಗಳಿಗೆ ಅತೀತನಾಗಿ ಚೇತನಾತ್ಮದ ತನ್ನ ಶುದ್ಧ ಸ್ವರೂಪ ಸ್ಥಿತಿಯಲ್ಲಿ, ತನ್ನನ್ನು ಸ್ಥಾಪಿಸಿಕೊಳ್ಳಬೇಕೆಂದು ಕೃಷ್ಣನು ಅರ್ಜುನನಿಗೆ ಸಲಹೆ ನೀಡುತ್ತಿದ್ದಾನೆ.

ನಾವು ಈಗಾಗಲೇ ಹೇಳಿರುವಂತೆ—ಶಾಖ ಮತ್ತು ಶೀತ, ಸುಖ ಮತ್ತು ದುಃಖ—ಈ ದ್ವಂದ್ವಗಳು ಇಂದ್ರಿಯಗಳ ವಿಷಯಗಳ ಸಂಪರ್ಕದ ನಿಮಿತ್ತವಾಗಿ ಉಂಟಾಗುತ್ತವೆ. ಅರ್ಥಾತ್ ದೇಹದೊಂದಿಗೆ ಗುರುತಿಸಿಕೊಳ್ಳುವುದರಿಂದ ಅವು ಉಂಟಾಗುತ್ತದೆ. ಭೋಗ ಮತ್ತು ಅಧಿಕಾರಕ್ಕೆ ಅರ್ಪಿತರಾದವರು ಯಜ್ಞ ಮತ್ತು ನಿಯಂತ್ರಣ ಚಟುವಟಿಕೆಗಳಿಂದ ದುಃಖ ಅಥವಾ ಸ್ವರ್ಗಭೋಗಗಳನ್ನು ಆಶ್ವಾಸಿಸುವ ವೇದ ವಚನಗಳಿಂದ ಅಪಹೃತರಾಗುತ್ತಾರೆ ಎಂದು ಕೃಷ್ಣನು ಸೂಚಿಸುತ್ತಾನೆ. ಭೋಗವು ಚೇತನಾತ್ಮನ ಲಕ್ಷಣವಾಗಿರುವುದರಿಂದ ಅದು ನಮ್ಮ ಜನ್ಮಸಿದ್ಧ ಅಧಿಕಾರ, ಆದರೆ ಚೇತನಾತ್ಮನು ಭೌತಿಕವಾಗಿ ಭೋಗಿಸಬಯಸುತ್ತಾನೆ, ಇದೇ ತಪ್ಪು.

ಪ್ರತಿಯೊಬ್ಬನೂ ಭೋಗಕ್ಕಾಗಿ ಭೌತಿಕ ವಿಷಯಗಳ ಕಡೆಗೆ ತಿರುಗುತ್ತಾನೆ ಮತ್ತು ಸಾಧ್ಯವಿದ್ದ ಜ್ಞಾನವನ್ನೆಲ್ಲ ಸಂಕಲ್ಪಿಸುತ್ತಾನೆ. ಒಬ್ಬನು ರಾಸಾಯನಿಕ, ಭೌತಜ್ಞ, ರಾಜಕಾರಣಿ ಅಥವಾ ಕಲಾವಿದ ಅಥವಾ ಇನ್ನೇನೋ ಆಗುತ್ತಾನೆ. ಪ್ರತಿಯೊಬ್ಬನು ಪ್ರತಿಯೊಂದರ ಸ್ವಲ್ಪವನ್ನು ಮತ್ತು ಯಾವುದೊಂದರ ಪ್ರತಿಯೊಂದನ್ನು ತಿಳಿದಿರುತ್ತಾನೆ ಮತ್ತು ಇದು ಸಾಮಾನ್ಯವಾಗಿ ಜ್ಞಾನವೆಂದು ವಿಧಿತವಾಗಿದೆ. ಆದರೆ ನಾವು ದೇಹ ಬಿಟ್ಟೊಡನೆಯೇ ಈ ಎಲ್ಲ ಜ್ಞಾನವು ಮಾಯವಾಗುತ್ತದೆ. ಪೂರ್ವ ಜನ್ಮದಲ್ಲಿ ಒಬ್ಬನು ಮಹಾಜ್ಞಾನಿಯಾಗಿರಬಹುದು ಆದರೆ ಈ ಜನ್ಮದಲ್ಲಿ ಅವನು ಮತ್ತೆ ಶಾಲೆಗೆ ಹೋಗಿ ಪ್ರಾರಂಭದಿಂದ ಓದು ಬರಹ ಕಲಿಯಬೇಕಾಗುವುದು. ಪೂರ್ವ ಜನ್ಮದಲ್ಲಿ ಯಾವುದೇ ಜ್ಞಾನ ಅರ್ಜಿತವಾಗಿರಲಿ ಅದು ಮರೆತು ಹೋಗುತ್ತದೆ. ವಸ್ತುತಃ ನಾವು ಶಾಶ್ವತ ಜ್ಞಾನಾಪೇಕ್ಷಿಗಳು, ಆದರೆ ಇದು ಈ ಭೌತಿಕ

ದೇಹದಿಂದ ಅರ್ಜಿಸಲಾಗದು. ನಾವೆಲ್ಲ ಈ ದೇಹಗಳ ಮೂಲಕ ಭೋಗ ಬಯಸುತ್ತೇವೆ. ಆದರೆ ದೈಹಿಕ ಭೋಗವು ನಮ್ಮ ವಾಸ್ತವಿಕ ಭೋಗವಲ್ಲ, ಅದು ಕೃತಕ. ನಾವು ಈ ಕೃತಕ ಭೋಗದಲ್ಲಿ ಮುಂದುವರಿಯಬಯಸಿದರೆ ನಾವು ನಮ್ಮ ಶಾಶ್ವತ ಭೋಗದ ಸ್ವರೂಪವನ್ನು ಹೊಂದಲು ಶಕ್ತರಾಗುವುದಿಲ್ಲ ಎಂಬುದನ್ನು ಅರಿತುಕೊಳ್ಳಬೇಕು.

ದೇಹವು ರುಗ್ಣ ಸ್ಥಿತಿ ಎಂದು ಭಾವಿಸಬೇಕು. ರೋಗಿಯು ಸರಿಯಾಗಿ ಭೋಗಿಸಲಾರನು. ಉದಾಹರಣೆಗೆ ಕಾಮಾಲೆ ರೋಗದಿಂದ ಪೀಡಿತನಾದವನು ಸಕ್ಕರೆಯಲ್ಲಿ ಕಹಿ ಅನುಭವಿಸುವನು. ಆದರೆ ಆರೋಗ್ಯವಂತನು ಅದರ ಸಿಹಿಯನ್ನು ಸವಿಯಬಲ್ಲನು. ಉಭಯ ಪ್ರಸಂಗಗಳಲ್ಲಿ ಸಕ್ಕರೆಯು ಒಂದೇ. ನಮ್ಮ ಸಾಕ್ಷಿಗನುಸಾರ ಅದು ಭಿನ್ನ ಭಿನ್ನ ರುಚಿ ಹೊಂದಿರುತ್ತದೆ. ನಾವು ದೈಹಿಕ ಜೀವನದ ಈ ರೋಗಗ್ರಸ್ತ ಕಲ್ಪನೆಯಿಂದ ವಾಸಿಯಾಗದ ಹೊರತು, ಆಧ್ಯಾತ್ಮಿಕ ಜೀವನದ ಸಿಹಿಯನ್ನು ಸವಿಯಲಾರೆವು. ನಿಜವಾಗಿ ಅದು ನಮಗೆ ಕಹಿಯಾಗಿರುವುದು. ಜೊತೆಗೆ, ನಮ್ಮ ಭೌತಿಕ ಜೀವನದ ಭೋಗವೃದ್ಧಿಯಿಂದ ನಾವು ನಮ್ಮ ರುಗ್ಣ ಸ್ಥಿತಿಯನ್ನು ಮತ್ತಷ್ಟು ಜಟಿಲಗೊಳಿಸುತ್ತಿದ್ದೇವೆ. ವಿಷಮಜ್ವರ ಪೀಡಿತನು ಗಟ್ಟಿ ಆಹಾರ ಸೇವಿಸಲಾರನು, ಆದರೆ ರುಚಿಸಲು ಒಬ್ಬನು ಅದನ್ನು ಅವನಿಗೆ ನೀಡಿದರೆ ಮತ್ತು ಅದನ್ನು ಅವನು ತಿಂದರೆ, ಅವನು ತನ್ನ ಸ್ಥಿತಿಯನ್ನು ಮತ್ತಷ್ಟು ಜಟಿಲಗೊಳಿಸುತ್ತಾನೆ ಮತ್ತು ತನ್ನ ಪ್ರಾಣವನ್ನು ಅಪಾಯಕ್ಕೀಡು ಮಾಡುತ್ತಾನೆ. ನಾವು ಭೌತಿಕ ಅಸ್ತಿತ್ವದ ಕ್ಲೇಶಗಳಿಂದ ನಿಜವಾಗಿಯೂ ಬಿಡುಗಡೆ ಬಯಸುವುದಾದರೆ, ನಾವು ನಮ್ಮ ದೈಹಿಕ ಬೇಡಿಕೆಗಳನ್ನು ಮತ್ತು ಸುಖಗಳನ್ನು ಬಹುಮಟ್ಟಿಗೆ ಕಡಿಮೆ ಮಾಡಿಕೊಳ್ಳಬೇಕು.

ವಾಸ್ತವಿಕವಾಗಿ ಭೌತಿಕ ಭೋಗವು ಭೋಗವೇ ಅಲ್ಲ, ನಿಜ ಭೋಗವು ಕೊನೆಗೊಳ್ಳುವುದಿಲ್ಲ. ಮಹಾಭಾರತದಲ್ಲಿ ರಮಂತೇ ಯೋಗಿನೋಽನಂತೇ ಎಂದರೆ ಆಧ್ಯಾತ್ಮಿಕ ವೇದಿಕೆಗೆ ತಮ್ಮನ್ನು ಉನ್ನತಿಸಿಕೊಳ್ಳಲು ಯತ್ನಿಸುವ ಯೋಗಿಗಳು (ಯೋಗಿನಃ) ವಾಸ್ತವಿಕವಾಗಿ ಭೋಗ ಮಾಡುತ್ತಾರೆ, (ರಮಂತೇ) ಆದರೆ ಅವರ ಭೋಗವು ಅನಂತೇ—ಅಂತ್ಯವಿಲ್ಲದ್ದು ಎಂಬ ಶ್ಲೋಕವಿದೆ. ಏಕೆಂದರೆ ಅವರ ಭೋಗವು ಪರಮ ಭೋಕ್ತಾರನ (ರಾಮ), ಶ್ರೀಕೃಷ್ಣನ ಸಂಬಂಧದಲ್ಲಿರುವುದು. ಭಗವಾನ್, ಶ್ರೀಕೃಷ್ಣನು ನಿಜ ಭೋಕ್ತಾರನು ಮತ್ತು ಭಗವದ್ಗೀತೆಯು ಇದನ್ನು ದೃಢಪಡಿಸುತ್ತದೆ.

**ಭೋಕ್ತಾರಂ ಯಜ್ಞ ತಪಸಾಂ ಸರ್ವಲೋಕ ಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ॥**

"ಪೂರ್ಣವಾಗಿ ನನ್ನ ಪ್ರಜ್ಞೆಯಲ್ಲಿರುವವನು, ನನ್ನನ್ನು ಎಲ್ಲ ಯಜ್ಞಗಳ ಮತ್ತು ವ್ರತಗಳ ಅಂತಿಮ ಭೋಕ್ತಾರನೆಂದು, ಸಕಲ ಲೋಕಗಳ ಮತ್ತು ದೇವತೆಗಳ ಪರಮ ಪ್ರಭುವೆಂದು ಮತ್ತು ಸಕಲ ಜೀವಿಗಳ ಆಶ್ರಯದಾತ ಮತ್ತು ಹಿತೈಷಿಯೆಂದು ತಿಳಿದು ಭೌತಿಕ ವೇದನೆಗಳಿಂದ ಶಾಂತಿಯನ್ನು ಹೊಂದುತ್ತಾನೆ" (ಭ. ಗೀ. 5-29).

ಭೋಗ ಎಂದರೆ ಅನುಭೋಗಿಸುವುದು ಮತ್ತು ಭೋಗಿಸಲ್ಪಡುವವರೆಂಬ ನಮ್ಮ ಸ್ಥಿತಿಯ ಅರಿವಿಕೆಯಿಂದ ನಮಗೆ ಭೋಗವು ದೊರೆಯುತ್ತದೆ. ಪರಮ ಪ್ರಭುವು ನಿಜವಾದ ಭೋಕ್ತಾರನು ಮತ್ತು ಅವನಿಂದ ನಾವು ಭುಂಕ್ತರು. ಈ ಸಂಬಂಧದ ಉದಾಹರಣೆಯನ್ನು ಭೌತಿಕ ಜಗತ್ತಿನಲ್ಲಿ ಪತಿ-ಪತ್ನಿಯರ ನಡುವೆ ಕಾಣಬಹುದಾಗಿದೆ: ಪತಿಯು ಭೋಕ್ತಾರನು, **(ಪುರುಷ)** ಮತ್ತು ಪತ್ನಿಯು ಭುಂಕ್ತಳು **(ಪ್ರಕೃತಿ).** ಪ್ರಿ ಎಂದರೆ ಸ್ತ್ರೀ, ಪುರುಷ ಅಥವಾ ಚೇತನನು ವಿಷಯ ಮತ್ತು ಪ್ರಕೃತಿ ವಸ್ತು, ಆದರೆ ಭೋಗದಲ್ಲಿ ಪತಿ ಮತ್ತು ಪತ್ನಿಯರಿಬ್ಬರು ಭಾಗವಹಿಸುತ್ತಾರೆ. ವಾಸ್ತವಿಕ ಭೋಗವಿದ್ದಾಗ ಪತಿಯು ಹೆಚ್ಚು ಭೋಗಿಸುತ್ತಾನೆ ಅಥವಾ ಪತ್ನಿಯು ಕಡಿಮೆ ಭೋಗಿಸುತ್ತಾಳೆ ಎಂಬ ವ್ಯತ್ಯಾಸವಿಲ್ಲ. ಪುರುಷನು ಪ್ರಧಾನ ಮತ್ತು ಸ್ತ್ರೀ ಪ್ರಧಾನಾಧೀನವಾಗಿದ್ದರೂ ಭೋಗದ ವಿಷಯ ಬಂದಾಗ ವಿಭಜನೆಯಿಲ್ಲ. ವಿಶಾಲ ಮಟ್ಟದಲ್ಲಿ ಯಾವ ಜೀವಿಯೂ ಭೋಕ್ತಾರನಲ್ಲ.

ದೇವನು ಅನೇಕವಾಗಿ ವಿಸ್ತರಿಸಿದನು ಮತ್ತು ನಾವು ಆ ವಿಸ್ತರಣೆಗಳು. ದೇವನು ಅದ್ವಿತೀಯನು, ಆದರೆ ಅವನು ಭೋಗ ಮಾಡಲು ಅನೇಕವಾಗಲು ಇಚ್ಛಿಸಿದನು. ಒಂದು ಕೋಣೆಯಲ್ಲಿ ಒಬ್ಬನೇ ಕುಳಿತು ತನ್ನಷ್ಟಕ್ಕೆ ತಾನೇ ಮಾತನಾಡುತ್ತಿರುವಲ್ಲಿ ಕಿಂಚಿತ್ತೂ ಅಥವಾ ಏಷ್ಟೂ ಭೋಗವಿಲ್ಲ ಎಂಬುದು ನಮಗೆ ಅನುಭವವಿದೆ, ಆದರೆ ಅಲ್ಲಿ ಐದು ಜನರಿದ್ದರೆ ನಮ್ಮ ಭೋಗ ಅಧಿಕಗೊಳ್ಳುತ್ತದೆ ಮತ್ತು ನಾವು ಅನೇಕಾನೇಕ ಜನರೊಡನೆ ಕೃಷ್ಣನನ್ನು ಕುರಿತು ಚರ್ಚಿಸಿದರೆ ಭೋಗವು ಅನಂತಪಟ್ಟು ಹೆಚ್ಚುತ್ತದೆ. ಭೋಗ ಎಂದರೆ ವೈವಿಧ್ಯತೆ. ಭಗವನಂತನು ತನ್ನ ಭೋಗಕ್ಕಾಗಿ ಅನೇಕನಾದನು ಮತ್ತು ಹೀಗೆ ನಮ್ಮ ಸ್ಥಿತಿಯು ಭುಂಕ್ತಾರನದ್ದಾಗಿದೆ. ಅದು ನಮ್ಮ ಸ್ವರೂಪಸ್ಥಿತಿ ಮತ್ತು ನಮ್ಮ ಸೃಷ್ಟಿಯ ಉದ್ದೇಶ. ಭುಂಕ್ತ ಮತ್ತು ಭೋಕ್ತಾ ಉಭಯರಿಗೆ ಪ್ರಜ್ಞೆ ಇದೆ. ಆದರೆ ಭುಂಕ್ತವಿನ ಪ್ರಜ್ಞೆಯು ಭೋಕ್ತಾರನ ಪ್ರಜ್ಞೆಗೆ ಅಧೀನ. ಕೃಷ್ಣನು ಭೋಕ್ತಾರನು ಮತ್ತು ನಾವು ಭುಂಕ್ತರು ಆಗಿದ್ದರೂ, ಭೋಗದಲ್ಲಿ ಪ್ರತಿಯೊಬ್ಬನು ಸಮಾನವಾಗಿ ಭಾಗಿಯಾಗಬಹುದು. ನಾವು ಭಗವಂತನ ಭೋಗದಲ್ಲಿ ಭಾಗಿಗಳಾದಾಗ ನಮ್ಮ ಭೋಗವು ಪರಿಪೂರ್ಣಗೊಳ್ಳಬಹುದು. ದೈಹಿಕ ವೇದಿಕೆಯ ಮೇಲೆ ಪ್ರತ್ಯೇಕವಾಗಿ ನಮ್ಮ ಭೋಗದ ಸಂಭವವಿಲ್ಲ. ಜಡದೇಹ

ವೇದಿಕೆಯಲ್ಲಿ ಭೌತಿಕ ಭೋಗವನ್ನು ಭಗವದ್ಗೀತೆಯ ಉದ್ದಕ್ಕೂ ಅನುಮೋದಿಸಲಾಗಿಲ್ಲ.

ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣ ಸುಖದುಃಖದಾಃ ।
ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥

"ಹೇ ಕುಂತೀಪುತ್ರನೇ, ಸುಖದುಃಖಗಳ ಅಶಾಶ್ವತ ಕಾಣಿಸಿಕೊಳ್ಳುವಿಕೆ, ಕಾಲಕ್ರಮದಲ್ಲಿ ಅವುಗಳ ಮರೆಯಾಗುವಿಕೆ, ಚಳಿ ಬೇಸಿಗೆ ಕಾಲಗಳ ಬರ ಹೋಗುವಿಕೆಯಂತೆ. ಹೇ ಭರತವಂಶಜನೇ, ಅವು ಇಂದ್ರಿಯ ಅನುಭವದಿಂದ ಉಂಟಾಗುತ್ತವೆ ಮತ್ತು ಕ್ಷೋಭೆಗೊಳ್ಳುತ್ತವೆ. ಅವುಗಳನ್ನು ಸಹಿಸಿಕೊಳ್ಳಲು ಕಲಿಯಬೇಕು" (ಭ. ಗೀ. 2.14).

ಜಡಭೌತಿಕ ದೇಹವು ಭೌತಿಕ ಪ್ರಕೃತಿ ಗುಣಗಳ ಪರಸ್ಪರ ಕ್ರಿಯೆಯ ಪರಿಣಾಮ ಮತ್ತು ಅದು ನಾಶ ಹೊಂದುವುದು ಖಂಡಿತ.

ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ ಯುಧ್ಯಸ್ವ ಭಾರತ ॥

"ಅವಿನಾಶಿ ಮತ್ತು ಅಳತೆಗೆ ನಿಲುಕದ ನಿತ್ಯನಾದ ಆತ್ಮನ ಭೌತಿಕ ದೇಹವು ಕೊನೆಗೊಳ್ಳುವುದು ಖಂಡಿತ. ಆದ್ದರಿಂದ ಹೇ ಭರತ ವಂಶಜನೇ ಯುದ್ಧ ಮಾಡು" (ಭ.ಗೀ. 2.18).

ಆದ್ದರಿಂದ ನಾವು ಅಸ್ತಿತ್ವದ ದೈಹಿಕ ಕಲ್ಪನೆಯನ್ನು ದಾಟಬೇಕು ಮತ್ತು ನಮ್ಮ ಆಧ್ಯಾತ್ಮಿಕ ಜೀವನವನ್ನು ಹೊಂದಬೇಕು ಎಂದು ಶ್ರೀಕೃಷ್ಣನು ಪ್ರೋತ್ಸಾಹಿಸುತ್ತಾನೆ.

ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥

"ದೇಹಿಯು ಭೌತಿಕ ದೇಹ ಸಂಬಂಧದ ತ್ರಿಗುಣಗಳನ್ನು ದಾಟಿದಾಗ ಅವನು ಜನನ ಮರಣ ಮತ್ತು ವೃದ್ಧಾಪ್ಯದ ದುಃಖಗಳಿಂದ ಮುಕ್ತನಾಗಬಲ್ಲನು ಮತ್ತು ಈ ಜನ್ಮದಲ್ಲಿಯೇ ಅಮೃತವನ್ನು ಭೋಗಿಸಬಲ್ಲನು" (ಭ. ಗೀ. 14-20).

ನಮ್ಮನ್ನು ಮೂರು ಗುಣಗಳಿಗೆ ಅತೀತವಾಗಿ ಶುದ್ಧ ಬ್ರಹ್ಮ-ಭೂತ. ಅಧ್ಯಾತ್ಮ ವೇದಿಕೆಯಲ್ಲಿ ಪ್ರತಿಷ್ಠಿಸಿಕೊಳ್ಳಲು ನಾವು ಕೃಷ್ಣಪ್ರಜ್ಞೆ ವಿಧಾನವನ್ನು ಅಂಗೀಕರಿಸಬೇಕು. ಚೈತನ್ಯ ಮಹಾಪ್ರಭುಗಳ ಕೊಡುಗೆಯಾದ ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ, — ಹರೇ ರಾಮ, ಹರೇ ರಾಮ, ರಾಮ ರಾಮ,

ಹರೇ ಹರೇ, ಎಂಬ ಕೃಷ್ಣನಾಮಗಳ ಕೀರ್ತನೆಯು ಈ ಪ್ರಕ್ರಿಯೆಗೆ ಅನುಕೂಲಗೊಳಿಸುತ್ತದೆ. ಈ ವಿಧಾನವನ್ನು ಭಕ್ತಿಯೋಗ ಅಥವಾ ಮಂತ್ರಯೋಗ ಎಂದು ಕರೆಯಲಾಗಿದೆ ಮತ್ತು ಇದು ಅತ್ಯುನ್ನತ ದಿವ್ಯವಾದಿಗಳಿಂದ ಬಳಸಲ್ಪಡುತ್ತದೆ. ಹೇಗೆ ದಿವ್ಯವಾದಿಗಳು ಜನನ-ಮರಣಗಳಾಚೆಗೆ; ಭೌತಿಕ ದೇಹದಿಂದಾಚೆಗೆ ತಮ್ಮ ವ್ಯಕ್ತಿತ್ವವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ ಮತ್ತು ಭೌತಿಕ ಬ್ರಹ್ಮಾಂಡದಿಂದ ಆಧ್ಯಾತ್ಮಿಕ ಬ್ರಹ್ಮಾಂಡಗಳಿಗೆ ತಮ್ಮನ್ನು ವರ್ಗಾಯಿಸಿಕೊಳ್ಳುತ್ತಾರೆ ಎಂಬುವು ಮುಂದಿನ ಆಧ್ಯಾಯಗಳ ವಿಷಯಗಳು.

# ಮರಣ ಕಾಲದಲ್ಲಿ ಉನ್ನತಿ

ಹಟಯೋಗಿಗಳು, ಜ್ಞಾನಯೋಗಿಗಳು, ಧ್ಯಾನಯೋಗಿಗಳು ಮತ್ತು ಭಕ್ತಿಯೋಗಿಗಳು ಎಂದು ಕರೆಯಲ್ಪಡುವ ಅನೇಕ ದಿವ್ಯವಾದಿ ಯೋಗಿಗಳಿದ್ದಾರೆ ಮತ್ತು ಅವರೆಲ್ಲರೂ ಅಧ್ಯಾತ್ಮ ಜಗತ್ತಿಗೆ ವರ್ಗಾಯಿತರಾಗಲು ಅರ್ಹರು. ಯೋಗ ಎಂದರೆ "ಸಂಪರ್ಕಿಸುವುದು" ಎಂದು ಅರ್ಥ ಮತ್ತು ಯೋಗ ಪದ್ಧತಿಗಳು ನಮ್ಮನ್ನು ದಿವ್ಯ ಜಗತ್ತಿನೊಂದಿಗೆ ಸಂಪರ್ಕಿಸಿಕೊಳ್ಳಲು ಶಕ್ತಗೊಳಿಸಲು ಉದ್ದಿಷ್ಟವಾಗಿವೆ. ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಿದಂತೆ ಮೂಲತಃ ನಾವೆಲ್ಲರೂ ಪರಮ ಪ್ರಭುವಿನೊಂದಿಗೆ ಸಂಬಂಧಿತರು. ಆದರೆ ನಾವು ಭೌತಿಕ ಕಲ್ಮಷದಿಂದ ಬಾಧಿತರಾಗಿದ್ದೇವೆ. ಪ್ರಕ್ರಿಯೆ ಏನೆಂದರೆ ನಾವು ಆಧ್ಯಾತ್ಮಿಕ ಜಗತ್ತಿಗೆ ಹಿಂದಿರುಗಬೇಕು ಮತ್ತು ಸಂಪರ್ಕಿಸುವ ಆ ಪ್ರಕ್ರಿಯೆಯನ್ನು ಯೋಗ ಎಂದು ಕರೆಯಲಾಗಿದೆ. ಯೋಗ ಶಬ್ದದ ಮತ್ತೊಂದು ಅರ್ಥವೆಂದರೆ "ಯೋಗಹೊಂದುವುದು." ಸದ್ಯದಲ್ಲಿ ನಾವು ಭಗವದ್‌ಹೀನರು ಅಥವಾ ಪರಮ ಪ್ರಭು ರಹಿತರು. ನಾವು ಕೃಷ್ಣನನ್ನು ಅಥವಾ ದೇವರನ್ನು ನಮ್ಮ ಜೀವನಗಳಿಗೆ ಸೇರಿಸಿಕೊಂಡರೆ ಈ ಮಾನವ ಜನ್ಮವು ಪರಿಪೂರ್ಣವಾಗುತ್ತದೆ.

ಮರಣಕಾಲದಲ್ಲಿ ನಾವು ಪರಿಪೂರ್ಣತೆಯ ಆ ಪ್ರಕ್ರಿಯೆಯನ್ನು ಮುಗಿಸಬೇಕು. ನಮ್ಮ ಜೀವಿತ ಕಾಲದಲ್ಲಿ ನಾವು ಆ ಪರಿಪೂರ್ಣತೆಯನ್ನು ಹೊಂದುವ ಪದ್ಧತಿಯನ್ನು ಅಭ್ಯಾಸ ಮಾಡಬೇಕು. ಏಕೆಂದರೆ ಮರಣಕಾಲದಲ್ಲಿ ನಾವು ಈ ಭೌತಿಕ ದೇಹವನ್ನು ತ್ಯಜಿಸಬೇಕಾದಾಗ, ಆ ಪರಿಪೂರ್ಣತೆಯನ್ನು ಸಾಕ್ಷಾತ್ಕರಿಸಿಕೊಳ್ಳಬಹುದು.

ಪ್ರಯಾಣಕಾಲೇ ಮನಸಾಽಚಲೇನ
ಭಕ್ತ್ಯಾ ಯುಕ್ತೋ ಯೋಗ—ಬಲೇನ ಚೈವ ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥

"ಯಾರು ಮರಣಕಾಲದಲ್ಲಿ ತನ್ನ ಪ್ರಾಣವಾಯುವನ್ನು ಎರಡು ಕಣ್ಣುಹುಬ್ಬುಗಳ ನಡುವೆ ನಿಲ್ಲಿಸುವನೋ ಮತ್ತು ಯೋಗ ಬಲದಿಂದ ಅವಿಚಲ ಮನಸ್ಸಿನಿಂದ ಪೂರ್ಣಭಕ್ತಿಯಲ್ಲಿ ಪರಮ ಪ್ರಭುವಿನ ಸ್ಮರಣೆಯಲ್ಲಿ ನಿರತನಾಗುವನೋ ಅವನು ಖಂಡಿತವಾಗಿ ಪರಮ ದೇವೋತ್ತಮ ಪುರುಷನನ್ನು ಸೇರುತ್ತಾನೆ" (ಭ. ಗೀ. 8.10).

ಒಬ್ಬ ವಿದ್ಯಾರ್ಥಿಯು ಹೇಗೆ ಒಂದು ವಿಷಯವನ್ನು ನಾಲ್ಕೈದು ವರ್ಷಗಳವರೆಗೆ ಅಭ್ಯಸಿಸಿ ಆಮೇಲೆ ಪರೀಕ್ಷೆಗೆ ಕುಳಿತು ಪದವಿಯನ್ನು ಪಡೆಯುವನೋ, ಅದೇ ಪ್ರಕಾರ ಜೀವನ ವಿಷಯದೊಂದಿಗೆ, ಮರಣ ಕಾಲದಲ್ಲಿ ಪರೀಕ್ಷೆಗಾಗಿ ನಮ್ಮ ಜೀವಮಾನದಲ್ಲಿ ಅಭ್ಯಾಸ ಮಾಡಿದರೆ ಮತ್ತು ನಾವು ಪರೀಕ್ಷೆಯಲ್ಲಿ ಉತ್ತೀರ್ಣರಾದರೆ, ನಾವು ಅಧ್ಯಾತ್ಮ ಜಗತ್ತಿಗೆ ವರ್ಗಾಯಿತರಾಗುತ್ತೇವೆ. ಮರಣಕಾಲದಲ್ಲಿ ನಮ್ಮ ಇಡೀ ಜೀವನದ ಪರೀಕ್ಷೆ ನಡೆಯುತ್ತದೆ.

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಂ ।**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ ॥**

"ಹೇ ಕುಂತೀ ಪುತ್ರನೇ, ಒಬ್ಬನು ಈ ದೇಹ ಬಿಡುವಾಗ ಯಾವ ಭಾವವನ್ನು ಸ್ಮರಿಸುತ್ತಾನೋ, ಅವನು ಆ ಭಾವವನ್ನು ತಪ್ಪದೇ ಹೊಂದುತ್ತಾನೆ" (ಭ. ಗೀ. 8.6).

ಒಬ್ಬನು ಪರಿಪೂರ್ಣತೆಗೆ ಏನೆಲ್ಲಾ ಮಾಡುವನೋ ಅದು ಮರಣಕಾಲದಲ್ಲಿ ಪರೀಕ್ಷಿಸಲ್ಪಡುತ್ತದೆ ಎಂದು ಒಂದು ಬಂಗಾಲಿ ಗಾದೆಯು ಹೇಳುತ್ತದೆ. ಒಬ್ಬನು ದೇಹ ಬಿಡುವಾಗ ಏನು ಮಾಡಬೇಕು ಎಂಬುದನ್ನು ಭಗವದ್ಗೀತೆಯಲ್ಲಿ ಕೃಷ್ಣನು ವರ್ಣಿಸುತ್ತಾನೆ. ಧ್ಯಾನ-ಯೋಗಿಗಾಗಿ ಶ್ರೀಕೃಷ್ಣನು ಈ ಮುಂದಿನ ಶ್ಲೋಕಗಳನ್ನು ಹೇಳುತ್ತಾನೆ.

**ಯದಕ್ಷರಂ ವೇದವಿದೋ ವದನ್ತಿ ವಿಶನ್ತಿ**
**ಯದ್ ಯತಯೋ ವೀತರಾಗಾಃ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥**

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥**

"ವೇದ ವಿದ್ವಾಂಸರು, ಓಂಕಾರವನ್ನು ಜಪಿಸುವವರು ಮತ್ತು ಸನ್ಯಾಸಾಶ್ರಮದ ಋಷಿಗಳು ಬ್ರಹ್ಮನ್‌ನಲ್ಲಿ ಪ್ರವೇಶಿಸುತ್ತಾರೆ. ಅಂತಹ ಪರಿಪೂರ್ಣತೆಯನ್ನು ಆಶಿಸಿ, ಒಬ್ಬನು ಬ್ರಹ್ಮಚರ್ಯೆಯನ್ನು ಆಚರಿಸುತ್ತಾನೆ. ಒಬ್ಬನು ಮೋಕ್ಷ ಹೊಂದಬಹುದಾದ ಈ ಪ್ರಕ್ರಿಯೆಯನ್ನು ನಾನು ಈಗ ಸಂಕ್ಷೇಪವಾಗಿ ನಿನಗೆ ವಿವರಿಸುತ್ತೇನೆ.

ಎಲ್ಲ ಇಂದ್ರಿಯ ನಿರತತೆಗಳಿಂದ ವಿರಕ್ತವಾಗುವುದೇ ಯೋಗ ಸ್ಥಿತಿ. ಇಂದ್ರಿಯ ದ್ವಾರಗಳನ್ನೆಲ್ಲಾ ಮುಚ್ಚಿ ಮತ್ತು ಮನಸ್ಸನ್ನು ಹೃದಯದಲ್ಲಿಯೂ ಮತ್ತು

ಪ್ರಾಣವಾಯುವನ್ನು ಶಿರಾಗ್ರದಲ್ಲಿಯೂ ಸ್ಥಿತಗೊಳಿಸಿ, ಒಬ್ಬನು ಯೋಗದಲ್ಲಿ ಸ್ಥಾಪಿತನಾಗುತ್ತಾನೆ" (ಭ. ಗೀ. 8. 11-12).

ಯೋಗ ಪದ್ಧತಿಯಲ್ಲಿ ಈ ಪ್ರಕ್ರಿಯೆಯನ್ನು ಪ್ರತ್ಯಾಹಾರ ಎಂದು ಕರೆಯಲಾಗಿದೆ. ಹಾಗೆಂದರೆ, "ತದ್ವಿರುದ್ಧ" ಎಂದು ಅರ್ಥ. ಜೀವಿತ ಕಾಲದಲ್ಲಿ ಕಣ್ಣುಗಳು ಲೌಕಿಕ ಸೌಂದರ್ಯ ನೋಡುವಲ್ಲಿ ನಿರತವಾಗಿದ್ದರೂ, ಮರಣ ಕಾಲದಲ್ಲಿ ಒಬ್ಬನು ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಂದೆ ಸೆಳೆದುಕೊಳ್ಳಬೇಕು ಮತ್ತು ಆಂತರಿಕ ಸೌಂದರ್ಯ ಕಾಣಬೇಕು. ಅದೇ ಪ್ರಕಾರ ಕಿವಿಗಳು ಜಗತ್ತಿನಲ್ಲಿ ನಾನಾ ಧ್ವನಿ ಕೇಳುವ ಅಭ್ಯಾಸ ಹೊಂದಿರುತ್ತವೆ. ಆದರೆ ಮರಣ ಘಳಿಗೆಯಲ್ಲಿ ಒಬ್ಬನು ಒಳಗಿನಿಂದ ದಿವ್ಯ ಓಂಕಾರವನ್ನು ಶ್ರವಣ ಮಾಡಬೇಕು.

ಓಂ ಇತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।<br>
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥

"ಈ ಯೋಗಾಭ್ಯಾಸದಲ್ಲಿ ಸನ್ನಿವೇಶಿತನಾಗಿ ಮತ್ತು ಅಕ್ಷರಗಳ ಪರಮ ಸಂಯೋಜನೆಯಾದ ಪವಿತ್ರ ಓಂಕಾರವನ್ನು ಉಚ್ಚರಿಸಿದ ನಂತರ, ಒಬ್ಬನು ಪರಮ ದೇವೋತ್ತಮ ಪುರುಷನನ್ನು ಸ್ಮರಿಸಿ ತನ್ನ ದೇಹವನ್ನು ತ್ಯಜಿಸಿದರೆ ಅವನು ಖಂಡಿತವಾಗಿ ಅಧ್ಯಾತ್ಮ ಲೋಕಗಳನ್ನು ಸೇರುತ್ತಾನೆ" (ಭ. ಗೀ. 813).

ಈ ರೀತಿಯಲ್ಲಿ ಎಲ್ಲಾ ಇಂದ್ರಿಯಗಳು ಅವುಗಳ ಬಾಹ್ಯ ಚಟುವಟಿಕೆಗಳಲ್ಲಿ ತಡೆಯಲ್ಪಡಬೇಕು ಮತ್ತು ಭಗವದ್ ರೂಪವಾದ ವಿಷ್ಣುಮೂರ್ತಿಯಲ್ಲಿ ಕೇಂದ್ರೀಕೃತವಾಗಬೇಕು. ಮನಸ್ಸು ಬಹು ಪ್ರಕ್ಷುಬ್ಧ ಆದರೆ ಅದನ್ನು ಭಗವಂತನಲ್ಲಿ ಸ್ಥಿತಗೊಳಿಸಬೇಕು ಮತ್ತು ಮನಸ್ಸು ಹೃದಯದಲ್ಲಿ ಸ್ಥಿತವಾದಾಗ ಮತ್ತು ಪ್ರಾಣವಾಯು ಶಿರಾಗ್ರಕ್ಕೆ ವರ್ಗಾಯಿಸಲ್ಪಟ್ಟಾಗ, ಒಬ್ಬನು ಯೋಗ ಪರಿಪೂರ್ಣತೆಯನ್ನು ಹೊಂದಬಹುದು.

ಈ ಘಟ್ಟದಲ್ಲಿ ಯೋಗಿಯು ತಾನು ಎಲ್ಲಿಗೆ ಹೋಗಬೇಕೆಂಬುದನ್ನು ನಿರ್ಧರಿಸುತ್ತಾನೆ. ಭೌತಿಕ ಬ್ರಹ್ಮಾಂಡದಲ್ಲಿ ಅಸಂಖ್ಯ ಗ್ರಹಗಳಿವೆ ಮತ್ತು ಈ ಬ್ರಹ್ಮಾಂಡದಾಚೆಗೆ ಅಧ್ಯಾತ್ಮ ಬ್ರಹ್ಮಾಂಡವಿದೆ. ಯೋಗಿಗಳು ಈ ಸ್ಥಳಗಳ ಬಗ್ಗೆ ವೇದ ಸಾಹಿತ್ಯದಿಂದ ತಿಳಿದುಕೊಂಡಿದ್ದಾರೆ. ಅಮೇರಿಕೆಗೆ ಹೋಗುವವನೊಬ್ಬನು ಆ ದೇಶ ಹೇಗಿದೆ ಎಂಬ ಬಗ್ಗೆ ಪುಸ್ತಕಗಳನ್ನು ಓದಿ ಏನೋ ಕಲ್ಪನೆಯನ್ನು ಪಡೆಯಬಹುದಾದಂತೆ, ಒಬ್ಬನು ವೇದ ಸಾಹಿತ್ಯ ಪಠನದಿಂದ ಅಧ್ಯಾತ್ಮ ಲೋಕಗಳ ಜ್ಞಾನವನ್ನು ಕೂಡ ಹೊಂದಬಹುದು. ಯೋಗಿಯು ಈ ಎಲ್ಲಾ ವರ್ಣನೆಗಳನ್ನು

ತಿಳಿದಿರುತ್ತಾನೆ ಮತ್ತು ಅವನು ಅಂತರಿಕ್ಷ ನೌಕೆಗಳ ಸಹಾಯವಿಲ್ಲದೆ ತನ್ನ ಇಷ್ಟ ಬಂದ ಗ್ರಹಕ್ಕೆ ತನ್ನನ್ನು ವರ್ಗಾಯಿಸಿಕೊಳ್ಳಬಲ್ಲನು. ಯಾಂತ್ರಿಕ ಸಾಧನೆಗಳ ಮೂಲಕ ಅಂತರಿಕ್ಷ ಸಂಚಾರವು ಇತರ ಗ್ರಹಗಳಿಗೆ ಉನ್ನತಿ ಹೊಂದಲು ಅಂಗೀಕೃತ ಪ್ರಕ್ರಿಯೆಯಲ್ಲ, ಪರಿಪೂರ್ಣತೆಯನ್ನು ಪ್ರಾಯಃ ಸಾಕಷ್ಟು ಕಾಲ, ಪ್ರಯತ್ನ ಮತ್ತು ಹಣದಿಂದ ಕೆಲವರು ಭೌತಿಕ ಸಾಧನೆಗಳು, ಅಂತರಿಕ್ಷ ನೌಕೆಗಳು, ಅಂತರಿಕ್ಷ ಉಡುಪುಗಳು ಇತ್ಯಾದಿಗಳಿಂದ ಇತರ ಗ್ರಹಗಳನ್ನು ತಲುಪಲು ಶಕ್ತರಾಗಬಹುದು. ಆದರೆ ಇದು ಬಹು ತೊಡಕಿನ ಮತ್ತು ಕಾರ್ಯಸಾಧ್ಯವಲ್ಲದ ವಿಧಾನ. ಏನೇ ಇರಲಿ, ಯಂತ್ರಸಾಧನಗಳ ಮೂಲಕ ಭೌತಿಕ ಬ್ರಹ್ಮಾಂಡದಾಚೆಗೆ ಹೋಗುವುದು ಅಸಾಧ್ಯ.

ಊರ್ಧ್ವಲೋಕಗಳಿಗೆ ವರ್ಗಾಯಿಸಿಕೊಳ್ಳಲು ಸಾಮಾನ್ಯವಾಗಿ ಅಂಗೀಕೃತ ವಿಧಾನವೆಂದರೆ ಧ್ಯಾನ-ಯೋಗ ಅಥವಾ ಜ್ಞಾನ-ಯೋಗ ಪದ್ಧತಿಯ ಅಭ್ಯಾಸ. ಆದರೆ ಭಕ್ತಿಯೋಗ ಪದ್ಧತಿಯನ್ನು ಯಾವುದೇ ಭೌತಿಕ ಗ್ರಹಕ್ಕೆ ವರ್ಗಾವಣೆಗಾಗಿ ಅಭ್ಯಾಸಿಸಬೇಕಾಗಿಲ್ಲ. ಏಕೆಂದರೆ ಈ ಭೌತಿಕ ಜಗತ್ತಿನಲ್ಲಿ ಯಾವ ಗ್ರಹವನ್ನು ಪ್ರವೇಶಿಸಿದರೂ, ಜನನ, ವೃದ್ಧಾಪ್ಯ, ವ್ಯಾಧಿ ಮತ್ತು ಮರಣ ಈ ನಾಲ್ಕು ತತ್ತ್ವಗಳು ಇದ್ದೇ ಇರುತ್ತವೆ ಎಂದು ಶ್ರೀ ಕೃಷ್ಣನ (ಪರಮ ಪ್ರಭುವಿನ) ದಾಸರು ತಿಳಿದಿರುತ್ತಾರೆ. ಊರ್ಧ್ವಗ್ರಹಗಳಲ್ಲಿ ಈ ಭೂಲೋಕಕ್ಕಿಂತ ಆಯುರ್ಮಾನವು ದೀರ್ಘವಾಗಿರುವುದು, ಆದರೆ ಹಾಗಿದ್ದರೂ ಅಲ್ಲಿ ಮರಣವಿದೆ. `ಭೌತಿಕ ಬ್ರಹ್ಮಾಂಡ' ಎಂದಾಗ ನಾವು ಜನನ, ವೃದ್ಧಾಪ್ಯ, ವ್ಯಾಧಿ ಮತ್ತು ಮರಣಗಳಿರುವ ಗ್ರಹಗಳನ್ನು ಸೂಚಿಸುತ್ತೇವೆ ಮತ್ತು `ಆಧ್ಯಾತ್ಮ ಬ್ರಹ್ಮಾಂಡ' ಎಂದಾಗ ನಾವು ಜನನ, ವೃದ್ಧಾಪ್ಯ, ವ್ಯಾಧಿ ಮತ್ತು ಮರಣಗಳಿಲ್ಲದ ಗ್ರಹಗಳನ್ನು ಸೂಚಿಸುತ್ತೇವೆ. ಬುದ್ಧಿಯುಕ್ತರಾದವರು ಭೌತಿಕ ಬ್ರಹ್ಮಾಂಡದಲ್ಲಿಯ ಯಾವುದೇ ಗ್ರಹಕ್ಕೆ ತಮ್ಮನ್ನು ಉನ್ನತಿಸಿಕೊಳ್ಳಲು ಯತ್ನಿಸುವುದಿಲ್ಲ.

ಒಬ್ಬನು ಯಾಂತ್ರಿಕ ಸಾಧನಗಳ ಮೂಲಕ ಊರ್ಧ್ವಗ್ರಹವ್ಯೂಹಗಳನ್ನು ಪ್ರವೇಶಿಸಲೆತ್ನಿಸಿದರೆ ತಕ್ಷಣ ಮರಣವು ಖಂಡಿತ. ಏಕೆಂದರೆ ದೇಹವು ವಾತಾವರಣದ ತೀವ್ರ ಬದಲಾವಣೆಗಳನ್ನು ಸಹಿಸಿಕೊಳ್ಳಲಾರದು. ಆದರೆ ಒಬ್ಬನು ಯೋಗಪದ್ಧತಿಯಿಂದ ಊರ್ಧ್ವಗ್ರಹಗಳಿಗೆ ಹೋಗಲೆತ್ನಿಸಿದರೆ, ಅವನು ಪ್ರವೇಶಕ್ಕೆ ಸೂಕ್ತವಾದ ದೇಹವನ್ನು ಪಡೆಯುವನು. ನಾವು ಇದನ್ನು ಈ ಲೋಕದಲ್ಲಿ ಪ್ರಾಯೋಗಿಕವಾಗಿ ಕಾಣಬಹುದು. ಏಕೆಂದರೆ ನಾವು ಜಲಮಯ ವಾತಾವರಣದಲ್ಲಿ ಸಮುದ್ರದಲ್ಲಿ ಜೀವಿಸುವುದು ಅಸಂಭವವಾಗಿದೆ ಅಥವಾ ಜಲಚರಗಳು ಭೂಮಿಯ ಮೇಲಿರುವುದು ಅಸಂಭವ ಎಂದು ತಿಳಿದಿದ್ದೇವೆ. ನಾವು ತಿಳಿದಿರುವಂತೆ, ಈ

ಲೋಕದಲ್ಲಿ ಕೂಡ ವಿಶಿಷ್ಟ ಸ್ಥಳದಲ್ಲಿ ಜೀವಿಸಲು ಒಬ್ಬನು ವಿಶಿಷ್ಟ ಮಾದರಿಯ ದೇಹ ಹೊಂದಿರಬೇಕು. ಆದ್ದರಿಂದ ಇತರ ಗ್ರಹಗಳಿಗೆ ವಿಶಿಷ್ಟ ಮಾದರಿಯ ದೇಹ ಅಗತ್ಯ. ಊರ್ಧ್ವಗ್ರಹಗಳಲ್ಲಿ ದೇಹಗಳು ಭೂಲೋಕಕ್ಕಿಂತ ಹೆಚ್ಚು ಕಾಲ ಜೀವಿಸುತ್ತವೆ, ಏಕೆಂದಲೆ ಭೂಲೋಕದಲ್ಲಿಯ ಆರು ತಿಂಗಳು ಊರ್ಧ್ವಗ್ರಹಗಳಲ್ಲಿ ಒಂದು ದಿನಕ್ಕೆ ಸಮಾನ. ಹೀಗೆ ಊರ್ಧ್ವಗ್ರಹಗಳಲ್ಲಿ ಇರುವವರು ಭೂಮಾನದಿಂದ ಹತ್ತು ಸಾವಿರ ವರ್ಷಗಳಿಗೆ ಮೇಲ್ಪಟ್ಟು ಜೀವಿಸುವರೆಂದು ವೇದಗಳು ವರ್ಣಿಸುತ್ತವೆ. ಇಷ್ಟು ದೀರ್ಘ ಆಯುರ್ಮಾನವಿದ್ದರೂ ಕೂಡ ಮರಣವು ಪ್ರತಿಯೊಬ್ಬನಿಗೆ ಕಾದಿದೆ. ಒಬ್ಬನು ಇಪ್ಪತ್ತು ಸಾವಿರ ಅಥವಾ ಐವತ್ತು ಸಾವಿರ ಅಥವಾ ಲಕ್ಷೋಪಲಕ್ಷ ವರ್ಷ ಕೂಡ ಜೀವಿಸಿದರೂ ಭೌತಿಕಲೋಕದಲ್ಲಿ ಆ ಎಲ್ಲ ವರ್ಷಗಳು ಪರಿಗಣಿತವಾಗಿ ಮರಣವಿದ್ದೇ ಇದೆ. ನಾವು ಮರಣದ ಹತೋಟಿಯನ್ನು ಹೇಗೆ ತಪ್ಪಿಸಿಕೊಳ್ಳಬಹುದು? ಅದೇ **ಭಗವದ್ಗೀತೆಯ** ಬೋಧನೆ (ಭ. ಗೀ. 2.20).

**ನ ಜಾಯತೇ ಮ್ರಿಯತೇ ವಾ ಕದಾಚಿನ್**
**ನಾಯಂ ಭೂತ್ವಾ ಭವಿತಾ ವಾ ನ ಭೂಯಃ**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ**

"ಜನನ ಅಥವಾ ಮರಣ ಆತ್ಮಕ್ಕೆ ಯಾವ ಕಾಲದಲ್ಲಿಯೂ ಇಲ್ಲ. ಅವನು ಅಸ್ತಿತ್ವಕ್ಕೆ ಬಂದಿಲ್ಲ, ಬಂದಿರುವುದೂ ಇಲ್ಲ ಮತ್ತು ಮುಂದೆ ಬರುವುದೂ ಇಲ್ಲ, ಅವನು ಜನನರಹಿತ, ನಿತ್ಯ ಸದಾಸ್ಥಿತ ಮತ್ತು ಅನಾದಿ. ದೇಹವು ಕೊಲ್ಲಲ್ಪಟ್ಟಾಗ ಅವನು ಕೊಲ್ಲಲ್ಪಡುವುದಿಲ್ಲ."

ನಾವು ಚೇತನಾತ್ಮರು, ಆದ್ದರಿಂದ ನಾವು ನಿತ್ಯರು, ಹೀಗಿರುವಾಗ ನಾವೇಕೆ ಜನನ ಮರಣಗಳಿಗೆ ಒಳಪಡಬೇಕು? ಈ ಪ್ರಶ್ನೆ ಕೇಳುವವನನ್ನು ಬುದ್ಧಿವಂತನೆಂದು ಪರಿಗಣಿಸಬೇಕು. ಕೃಷ್ಣಪ್ರಾಜ್ಞರು ಮರಣವಿರುವ ಯಾವ ಗ್ರಹಕ್ಕೂ ಪ್ರವೇಶ ಪಡೆಯುವಲ್ಲಿ ಆಸಕ್ತರಲ್ಲವಾದ್ದರಿಂದ, ಬಹು ಬುದ್ಧಿವಂತರು. ದೇವರಂತಹ ದೇಹ ಪಡೆಯಲು ಅವರು ದೀರ್ಘ ಜೀವನವನ್ನು ನಿರಾಕರಿಸುತ್ತಾರೆ. **ಈಶ್ವರಃ ಪರಮಃ ಕೃಷ್ಣಃ ಸಚ್ಚಿದಾನಂದವಿಗ್ರಹಃ. ಸತ್** ಎಂದರೆ ನಿತ್ಯ, **ಚಿತ್** ಎಂದರೆ ಜ್ಞಾನಮಯ ಮತ್ತು ಆನಂದ ಎಂದರೆ ಆನಂದಮಯ. ಕೃಷ್ಣನು ಸಕಲಾನಂದದ ನಿಧಿ. ನಾವು ಈ ದೇಹದಿಂದ ಕೃಷ್ಣಲೋಕ, ಕೃಷ್ಣಗ್ರಹ ಅಥವಾ ಯಾವುದೇ ಇತರ ಅಧ್ಯಾತ್ಮ ಲೋಕಕ್ಕೆ ಅಧ್ಯಾತ್ಮ ಜಗತ್ತಿಗೆ ನಮ್ಮನ್ನು ವರ್ಗಾಯಿಸಿಕೊಂಡರೆ, ನಾವು ಅದೇ ಬಗೆಯ ಸಚ್ಚಿದಾನಂದ ಶರೀರವನ್ನು ಪಡೆಯುತ್ತೇವೆ. ಹೀಗೆ ಕೃಷ್ಣಪ್ರಾಜ್ಞರಾದವರ ಧ್ಯೇಯವು

ಈ ಭೌತಿಕ ಜಗತ್ತಿನಲ್ಲಿ ಊರ್ಧ್ವಲೋಕಗಳಿಗೆ ತಮ್ಮನ್ನು ಉನ್ನತಿಸಿಕೊಳ್ಳುವವರ ಧ್ಯೇಯದಿಂದ ಭಿನ್ನ.

ವ್ಯಕ್ತಿಯ ಆತ್ಮವು ಸೂಕ್ಷ್ಮ ಆಧ್ಯಾತ್ಮ ಕಿಡಿ. ಯೋಗದ ಪರಿಪೂರ್ಣತೆಯ ಈ ಆಧ್ಯಾತ್ಮ ಕಿಡಿಯನ್ನು ಅತ್ಯುಚ್ಚ ಶಿಖರಕ್ಕೆ ವರ್ಗಾಯಿಸುವುದರಲ್ಲಿದೆ. ಅದನ್ನು ಹೊಂದಿ ಯೋಗಿಯು ತನ್ನನ್ನು ತನ್ನ ಇಚ್ಛಾನುಸಾರ ಈ ಭೌತಿಕ ಜಗತ್ತಿನಲ್ಲಿ ಯಾವ ಗ್ರಹಕ್ಕಾದರೂ ವರ್ಗಾಯಿಸಿಕೊಳ್ಳಬಲ್ಲನು. ಚಂದ್ರನು ಏನಿರಬಹುದೆಂದು ತಿಳಿಯಲು ಯೋಗಿಯು ಕಾತುರನಾಗಿದ್ದರೆ, ಅವನು ತನ್ನನ್ನು ಅಲ್ಲಿಗೆ ವರ್ಗಾಯಿಸಿಕೊಳ್ಳಬಹುದು ಅಥವಾ ಅವನು ಊರ್ಧ್ವಗ್ರಹಗಳಲ್ಲಿ ಆಸಕ್ತನಾಗಿದ್ದರೆ, ಪ್ರವಾಸಿಗರು ನ್ಯೂಯಾರ್ಕ್, ಕೆನಡಾ ಅಥವಾ ಭೂಮಿಯ ಮೇಲೆ ಇತರ ನಗರಗಳಿಗೆ ಹೋಗುವಂತೆ ಅವನು ತನ್ನನ್ನು ಅಲ್ಲಿಗೆ ವರ್ಗಾಯಿಸಿಕೊಳ್ಳಬಹುದು. ಒಬ್ಬನು ಭೂಮಿಯ ಮೇಲೆ ಎಲ್ಲಿಯೇ ಹೋಗಲಿ ಅಲ್ಲಿ ಅದೇ ರಹದಾರಿ ಮತ್ತು ಸೀಮಾ ಪದ್ಧತಿಗಳು ಪ್ರವರ್ತಿಸುವುದನ್ನು ಕಾಣುತ್ತಾನೆ ಮತ್ತು ಅದೇ ಪ್ರಕಾರ ಎಲ್ಲ ಭೌತಿಕ ಗ್ರಹಗಳಲ್ಲಿ ಒಬ್ಬನು ಜನನ, ವೃದ್ಧಾಪ್ಯ, ವ್ಯಾಧಿ ಮತ್ತು ಮರಣ ತತ್ತ್ವಗಳು ಪ್ರವರ್ತಿಸುವುದನ್ನು ಕಾಣುತ್ತಾನೆ.

ಓಂ ಇತಿ ಏಕಾಕ್ಷರಂ ಬ್ರಹ್ಮ: ಮರಣ ಕಾಲದಲ್ಲಿ ಯೋಗಿಯು ಓಂ, ಓಂಕಾರವನ್ನು, ದಿವ್ಯ ಧ್ವನಿ ಉಚ್ಚಾರದ ಸಂಕ್ಷಿಪ್ತ ರೂಪವನ್ನು ಉಚ್ಚರಿಸಬಹುದು. ಯೋಗಿಯು ಈ ಶಬ್ದವನ್ನು ಉಚ್ಚರಿಸುವುದಾದರೆ ಮತ್ತು ಜೊತೆಗೆ (ಮಾಂ ಅನುಸ್ಮರನ್) ಕೃಷ್ಣ ಅಥವಾ ವಿಷ್ಣುವನ್ನು ಸ್ಮರಿಸಿದರೆ, ಅವನು ಅತ್ಯುನ್ನತ ಗುರಿಯನ್ನು ಹೊಂದುತ್ತಾನೆ. ಮನಸ್ಸನ್ನು ವಿಷ್ಣುವಿನಲ್ಲಿ ಕೇಂದ್ರೀಕರಿಸುವುದು ಯೋಗ ಪ್ರಕ್ರಿಯೆ, ವ್ಯಕ್ತಿಶೂನ್ಯವಾದಿಗಳು ಪರಮಪ್ರಭುವಿನ ಯಾವುದೋ ರೂಪ ವನ್ನು ಊಹಿಸುತ್ತಾರೆ, ಆದರೆ ವ್ಯಕ್ತಿವಾದಿಗಳು ಇದನ್ನು ಊಹಿಸುವುದಿಲ್ಲ; ಅವರು ವಾಸ್ತವಿಕವಾಗಿ ಕಾಣುತ್ತಾರೆ. ಒಬ್ಬನು ಅವನನ್ನು ಊಹಿಸಲಿ ಅಥವಾ ವಾಸ್ತವಿಕವಾಗಿ ಕಾಣಲಿ, ಅವನು ಕೃಷ್ಣನ ವ್ಯಕ್ತಿಗತ ರೂಪದಲ್ಲಿ ಮನಸ್ಸನ್ನು ಕೇಂದ್ರಿಕರಿಸಬೇಕು.

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥**

"ಹೇ ಪೃಥಾ ಪುತ್ರನೇ, ವಿಚಲತೆ ಇಲ್ಲದೆ ಸದಾ ನನ್ನನ್ನು ಸ್ಮರಿಸುವವನಿಗೆ ಭಕ್ತಿಯುತ ಸೇವೆಯಲ್ಲಿ ಅವನ ಸತತ ನಿರತತೆಯ ಕಾರಣ, ನಾನು ಸುಲಭ ಲಭ್ಯನು" (ಭ. ಗೀ. 8.14).

ಅನಿತ್ಯ ಜೀವನ ಅನಿತ್ಯ ಸುಖ ಮತ್ತು ಅನಿತ್ಯ ಅನುಕೂಲಗಳೊಂದಿಗೆ ತೃಪ್ತರಾದವರು ಕನಿಷ್ಠ ಭಗವದ್ಗೀತಾನುಸಾರ ಬುದ್ಧಿಯುಕ್ತರೆಂದು ಪರಿಗಣಿಸಬಾರದು. ಗೀತೆಯನುಸಾರ ಬಹು ಅಲ್ಪ ಬುದ್ಧಿಶಕ್ತಿಯನ್ನು ಹೊಂದಿರುವವನು ಅನಿತ್ಯ ವಸ್ತುಗಳಲ್ಲಿ ಆಸಕ್ತನು. ನಾವು ನಿತ್ಯರು, ಆದ್ದರಿಂದ ನಾವೇಕೆ ಅನಿತ್ಯ ವಸ್ತುಗಳಲ್ಲಿ ಆಸಕ್ತರಾಗಬೇಕು? ಯಾರೂ ಅನಿತ್ಯ ಸನ್ನಿವೇಶವನ್ನು ಬಯಸುವುದಿಲ್ಲ. ನಾವು ಒಂದು ಮನೆಯಲ್ಲಿದ್ದರೆ ಮತ್ತು ಮಾಲೀಕನು ಅದನ್ನು ಖಾಲಿ ಮಾಡಲು ನಮಗೆ ಹೇಳಿದರೆ ನಾವು ಅಸಮಾಧಾನ ಹೊಂದುತ್ತೇವೆ. ಆದರೆ ನಾವು ಅದಕ್ಕಿಂತ ಒಳ್ಳೆಯ ಮನೆಗೆ ಹೋದರೆ ಖಿನ್ನರಾಗುವುದಿಲ್ಲ. ನಾವು ನಿತ್ಯರಾದ್ದರಿಂದ ಶಾಶ್ವತ ಧಾಮವನ್ನು ಬಯಸುವುದು ನಮ್ಮ ಸ್ವಭಾವ. ನಾವು ವಾಸ್ತವಿಕತೆಯಲ್ಲಿ ಶಾಶ್ವತರಾದ್ದರಿಂದ ಸಾಯಬಯಸುವುದಿಲ್ಲ ಅಥವಾ ನಾವು ಮುದುಕರಾಗಲು ಅಥವಾ ವ್ಯಾಧಿಗ್ರಸ್ತರಾಗಲು ಬಯಸುವುದಿಲ್ಲ ಏಕೆಂದರೆ, ಇವು ಎಲ್ಲ ಬಾಹ್ಯ ಅಥವಾ ಅನಿತ್ಯ ಸ್ಥಿತಿಗಳು. ನಾವು ಜ್ವರದಿಂದ ಬಳಲಲು ಉದ್ದಿಷ್ಟರಲ್ಲವಾಗಿದ್ದರೂ ಕೆಲವು ಸಲ ಜ್ವರ ಬರುತ್ತದೆ ಮತ್ತು ನಾವು ಗುಣಪಡಿಸಿಕೊಳ್ಳಲು ಎಚ್ಚರಿಕೆ ಮತ್ತು ಉಪಾಯ ಕೈಗೊಳ್ಳಬೇಕು. ನಾಲ್ಕು ಬಗೆಯ ಕ್ಲೇಶಗಳು ಜ್ವರ ಇದ್ದಂತೆ ಮತ್ತು ಅವು ಎಲ್ಲವು ಭೌತಿಕ ದೇಹ ನಿಮಿತ್ತವಾದುವು. ನಾವು ಹೇಗೋ ಭೌತಿಕ ದೇಹದಿಂದ ಹೊರಬರಲು ಸಾಧ್ಯವಾದರೆ ಈ ಜೀವನದೊಂದಿಗೆ ಸೇರಿಕೊಂಡ ಕ್ಲೇಶಗಳಿಂದ ಪಾರಾಗಬಹುದು.

ವ್ಯಕ್ತಿಶೂನ್ಯವಾದಿಗಳಿಗೆ ಈ ಅನಿತ್ಯ ದೇಹದಿಂದ ಹೊರಬರಲು ಅವರು ಓಂಕಾರವನ್ನು ಉಚ್ಚರಿಸಬೇಕು ಎಂದು ಕೃಷ್ಣನು ಇಲ್ಲಿ ಹೇಳುತ್ತಾನೆ. ಈ ರೀತಿಯಲ್ಲಿ ಅವರು ಆಧ್ಯಾತ್ಮ ಜಗತ್ತಿಗೆ ಜನ್ಮಾಂತರ ಹೊಂದುವರೆಂದು ಖಚಿತಗೊಳ್ಳಬಹುದು. ಆದರೆ, ಅವರು ಆಧ್ಯಾತ್ಮ ಜಗತ್ತನ್ನು ಪ್ರವೇಶಿಸಬಹುದಾದರೂ, ಅವರು ಅಲ್ಲಿ ಯಾವುದೇ ಗ್ರಹಗಳನ್ನು ಪ್ರವೇಶಿಸಲಾರರು, ಅವರು ಬ್ರಹ್ಮಜ್ಯೋತಿಯ ಹೊರಗೆ ಉಳಿಯುವರು. ಬ್ರಹ್ಮಜ್ಯೋತಿಯನ್ನು ಬಿಸಿಲಿಗೆ ಹೋಲಿಸಬಹುದು ಮತ್ತು ಆಧ್ಯಾತ್ಮ ಲೋಕಗಳನ್ನು ಸ್ವಯಂ ಸೂರ್ಯನಿಗೆ ಹೋಲಿಸಬಹುದು. ಅಧ್ಯಾತ್ಮ ಆಕಾಶದಲ್ಲಿ ವ್ಯಕ್ತಿಶೂನ್ಯವಾದಿಗಳು ಪರಮಪ್ರಭುವಿನ ಪ್ರಕಾಶದಲ್ಲಿ, ಬ್ರಹ್ಮಜ್ಯೋತಿಯಲ್ಲಿ ಉಳಿಯುತ್ತಾರೆ. ವ್ಯಕ್ತಿಶೂನ್ಯವಾದಿಗಳು ಬ್ರಹ್ಮಜ್ಯೋತಿಯಲ್ಲಿ ಅಧ್ಯಾತ್ಮ ಕಿಡಿಗಳಾಗಿ ಇರಿಸಲ್ಪಡುತ್ತಾರೆ ಮತ್ತು ಈ ರೀತಿಯಲ್ಲಿ ಬ್ರಹ್ಮಜ್ಯೋತಿಯು ಅಧ್ಯಾತ್ಮ ಕಿಡಿಗಳಿಂದ ಭರಿತ. ಇದೇ ಅಧ್ಯಾತ್ಮ ಅಸ್ತಿತ್ವದಲ್ಲಿ ಐಕ್ಯ ಎಂಬುದರ ಅರ್ಥ. ಒಬ್ಬನು ಅದರೊಟ್ಟಿಗೆ ಐಕ್ಯವಾಗುವನೆಂಬ

ಅರ್ಥದಲ್ಲಿ ಬ್ರಹ್ಮಜ್ಯೋತಿಯಲ್ಲಿ ಲೀನನಾಗುತ್ತಾನೆಂದು ಭಾವಿಸಕೂಡದು; ಅಧ್ಯಾತ್ಮ ಕಿಡಿಯ ವ್ಯಕ್ತಿತ್ವವು ಇರುತ್ತದೆ, ಆದರೆ ವ್ಯಕ್ತಿಶೂನ್ಯವಾದಿಯು ವ್ಯಕ್ತಿರೂಪ ತೆಗೆದುಕೊಳ್ಳಲು ಬಯಸುವುದಿಲ್ಲವಾದ್ದರಿಂದ, ಅವನು ಆ ಪ್ರಕಾಶದಲ್ಲಿ ಅಧ್ಯಾತ್ಮ ಕಿಡಿಯಾಗುತ್ತಾನೆ. ಸೂರ್ಯ ಪ್ರಕಾಶವು ಅನೇಕ ಅಣು ಕಣಗಳಿಂದ ಕೂಡಿರುವಂತೆ, ಬ್ರಹ್ಮಜ್ಯೋತಿಯು ಅನೇಕ ಅಧ್ಯಾತ್ಮ ಕಿಡಿಗಳಿಂದ ಕೂಡಿರುತ್ತದೆ.

ಆದರೆ ಜೀವಿಗಳಾಗಿ ನಮಗೆ ಭೋಗ ಬೇಕು. ಅದರಲ್ಲಿ ಇರುವಿಕೆ ಸಾಲದು. ನಮಗೆ ಆನಂದ ಮತ್ತು ಸತ್ ಬೇಕು. ತನ್ನ ಸಮಗ್ರತೆಯಲ್ಲಿ ಜೀವಿಯು ಶಾಶ್ವತತೆ, ಜ್ಞಾನ ಮತ್ತು ಆನಂದ ಮೂರು ಗುಣಗಳಿಂದ ಕೂಡಿದ್ದಾನೆ. ವ್ಯಕ್ತಿಶೂನ್ಯವಾಗಿ ಬ್ರಹ್ಮಜ್ಯೋತಿಯಲ್ಲಿ ಪ್ರವೇಶಿಸುವವರು ಕೆಲಕಾಲ ಮಾತ್ರ ನಾವು ಈಗ ಬ್ರಹ್ಮನ್ ಜೊತೆಗೆ ಏಕೀಭೂತರಾಗಿ ಐಕ್ಯರು ಎಂಬ ಪೂರ್ವಜ್ಞಾನದಲ್ಲಿ ಉಳಿಯಬಹುದು. ಆದರೆ ಅವರು ಶಾಶ್ವತ ಆನಂದ ಹೊಂದಲಾರರು, ಏಕೆಂದರೆ ಆ ಭಾಗ ಇರುವುದಿಲ್ಲ. ಒಬ್ಬನು ಒಂದು ಕೋಣೆಯಲ್ಲಿ ಸ್ವಲ್ಪಕಾಲ ಏಕಾಂಗಿಯಾಗಿ ಉಳಿಯಬಹುದು ಮತ್ತು ಪುಸ್ತಕ ಓದುತ್ತಾ ಅಥವಾ ಯಾವುದೋ ವಿಚಾರಮಗ್ನನಾಗಿ ತನ್ನಲ್ಲಿ ತಾನೇ ಸುಖಿಸಬಹುದು. ಆದರೆ ಆ ಕೋಣೆಯಲ್ಲಿ ಅನೇಕ ವರ್ಷಗಳ ಕಾಲ ಸತತ ಇರುವುದು ಸಾಧ್ಯವಿಲ್ಲ, ಚಿರಂತನವಾಗಿಯಂತೂ ಅಸಂಭವ. ಆದ್ದರಿಂದ ಪರಮ ಪುರುಷನ ಅಸ್ತಿತ್ವದಲ್ಲಿ ವ್ಯಕ್ತಿಶೂನ್ಯವಾಗಿ ಐಕ್ಯವಾಗುವವನಿಗೆ ಮತ್ತೆ ಯಾವುದಾದರೂ ಸಂಗವನ್ನರ್ಜಿಸಲು ಭೌತಿಕ ಜಗತ್ತಿಗೆ ಪತನ ಹೊಂದುವ ಸರ್ವ ಸಂಭವವಿದೆ. ಇದು ಶ್ರೀಮದ್ಭಾಗವತದ ನಿರ್ಣಯ. ಗಗನಗಾಮಿಗಳು ಸಹಸ್ರಾರು ಮೈಲು ಸಂಚರಿಸಬಹುದು, ಆದರೆ ಅವರು ಯಾವುದೋ ಗ್ರಹದಲ್ಲಿ ವಿಶ್ರಾಂತಿ ಪಡೆಯದಿದ್ದರೆ ಅವರು ಮತ್ತೆ ಭೂಮಿಗೆ ಮರಳಬೇಕಾಗುವುದು. ಏನೇ ಇದ್ದರೂ ವಿಶ್ರಾಂತಿ ಬೇಕು. ವ್ಯಕ್ತಿಶೂನ್ಯರೂಪದಲ್ಲಿ ವಿಶ್ರಾಂತಿ ಅನಿಶ್ಚಿತ. ಆದ್ದರಿಂದ ಅಷ್ಟೊಂದು ಪ್ರಯತ್ನದ ಬಳಿಕವೂ ವ್ಯಕ್ತಿಶೂನ್ಯವಾದಿಯು ಅಧ್ಯಾತ್ಮ ಲೋಕವನ್ನು ಪ್ರವೇಶಿಸಿ ವ್ಯಕ್ತಿಶೂನ್ಯರೂಪವನ್ನು ಅರ್ಜಿಸಿದರೆ ಅವನು ಪ್ರೇಮ ಮತ್ತು ಭಕ್ತಿಯಿಂದ ಪರಮ ಪುರುಷನ ಸೇವೆ ಮಾಡುವುದನ್ನು ನಿರ್ಲಕ್ಷಿಸಿದ್ದರಿಂದ ಅವನು ಮತ್ತೆ ಭೌತಿಕ ಜಗತ್ತಿಗೆ ಮರಳುತ್ತಾನೆ. ನಾವು ಈ ಭೂಮಿಯ ಮೇಲೆ ಇರುವವರೆಗೆ ಪರಮ ಪ್ರಭು ಶ್ರೀಕೃಷ್ಣನನ್ನು ಸೇವಿಸಲು ಮತ್ತು ಪ್ರೇಮಿಸಲು ಅಭ್ಯಾಸ ಮಾಡಲು ಕಲಿಯಬೇಕು. ಇದನ್ನು ಕಲಿತುಕೊಂಡರೆ ನಾವು ಆ ಅಧ್ಯಾತ್ಮ ಲೋಕಗಳಲ್ಲಿ ಪ್ರವೇಶಿಸಬಹುದು. ಅಧ್ಯಾತ್ಮ ಜಗತ್ತಿನಲ್ಲಿ ವ್ಯಕ್ತಿಶೂನ್ಯವಾದಿಯ ಸ್ಥಾನಮಾನವು ಅಶಾಶ್ವತ, ಏಕೆಂದರೆ ಏಕಾಂಗಿಯಾಗಿದ್ದು ಅವನು ಯಾವುದೋ ಸಂಗ ಅರ್ಜಿಸಲು ಪ್ರಯತ್ನಿಸುತ್ತಾನೆ.

ಅವನು ವ್ಯಕ್ತಿಗತವಾಗಿ ಪರಮ ಪ್ರಭುವಿನೊಂದಿಗೆ ಸಂಗ ಮಾಡುವುದಿಲ್ಲವಾದ್ದರಿಂದ, ಅವನು ಮತ್ತೆ ಈ ಜಗತ್ತಿಗೆ ಮರಳಬೇಕು ಮತ್ತು ಅಲ್ಲಿನ ಬದ್ಧ ಜೀವಿಗಳೊಂದಿಗೆ ಸೇರಬೇಕಾಗುವುದು.

ಆದ್ದರಿಂದ ನಾವು ನಮ್ಮ ಸ್ವರೂಪ ಸ್ಥಿತಿಯನ್ನು ತಿಳಿದುಕೊಳ್ಳುವುದು ಅತ್ಯಂತ ಮಹತ್ವದ್ದು. ನಮಗೆ ಶಾಶ್ವತತೆ, ಸಂಪೂರ್ಣ ಜ್ಞಾನ ಮತ್ತು ಸುಖ ಕೂಡ ಬೇಕು. ಬಹುಕಾಲ ನಾವು ಒಬ್ಬರೇ ಉಳಿದರೆ ನಮಗೆ ಸುಖ ಇರಲಾರದು—ನಾವು ಭೌತಿಕ ಜಗತ್ತು ನೀಡುವ ಸುಖವನ್ನು ಅಂಗೀಕರಿಸುತ್ತೇವೆ. ಕೃಷ್ಣಪ್ರಜ್ಞೆಯಲ್ಲಿ ನಿಜ ಆನಂದದ ಭೋಗವಿದೆ. ಭೌತಿಕ ಜಗತ್ತಿನಲ್ಲಿ ಲೈಂಗಿಕ ಸುಖವೇ ಪರಮಾವಧಿ ಎಂದು ಸಾಮಾನ್ಯವಾಗಿ ಅಂಗೀಕೃತವಾಗಿದೆ. ಇದು ಅಧ್ಯಾತ್ಮ ಜಗತ್ತಿನಲ್ಲಿಯ ಲೈಂಗಿಕ ಸುಖದ, ಕೃಷ್ಣನ ಸಂಗದ ಸುಖದ ತಿರೋಹಿತ ಛಾಯೆ. ಆದರೆ ಆ ಸುಖವು ಭೌತಿಕ ಜಗತ್ತಿನಲ್ಲಿಯ ಲೈಂಗಿಕ ಸುಖದಂತೆ ಎಂದು ನಾವು ಭಾವಿಸಕೂಡದು. ಹಾಗಿಲ್ಲದೆ ಅದು ಬೇರೆಯಾಗಿದೆ. ಆದರೆ ಅಧ್ಯಾತ್ಮ ಜಗತ್ತಿನಲ್ಲಿ ಲೈಂಗಿಕ ಸುಖ ಇದ್ದ ಹೊರತು ಅದು ಇಲ್ಲಿ ಪ್ರತಿಬಿಂಬಿತವಾಗಲಾರದು. ಅದು ಇಲ್ಲಿ ಕೇವಲ ತಿರೋಹಿತ ಛಾಯೆ—ಆದರೆ ಸುಖಪೂರ್ಣನಾದ ಕೃಷ್ಣನಲ್ಲಿ ವಾಸ್ತವಿಕ ಜೀವನವಿದೆ. ಆದ್ದರಿಂದ ಮರಣ ಒದಗಿದಾಗ ನಮ್ಮನ್ನು ಅಧ್ಯಾತ್ಮ ಲೋಕಕ್ಕೆ ಕೃಷ್ಣಲೋಕಕ್ಕೆ ವರ್ಗಾಯಿಸಿಕೊಳ್ಳಲು ಮತ್ತು ಅಲ್ಲಿ ಕೃಷ್ಣನೊಂದಿಗೆ ಸಂಗಮಾಡುವ ಅನುಕೂಲಕ್ಕಾಗಿ ನಮ್ಮನ್ನು ಈಗಲೇ ತಯಾರಿಸಿಕೊಳ್ಳುವುದು ಅತ್ಯುತ್ತಮ ಪ್ರಕ್ರಿಯೆ. ಬ್ರಹ್ಮಸಂಹಿತೆಯಲ್ಲಿ ಶ್ರೀಕೃಷ್ಣ ಮತ್ತು ಅವನ ಧಾಮವನ್ನೂ ಹೀಗೆ ವರ್ಣಿಸಲಾಗಿದೆ.

**ಚಿಂತಾಮಣಿ ಪ್ರಕರ ಸದ್ಮ ಸುಕಲ್ಪ ವೃಕ್ಷ**
**ಲಕ್ಷಾವೃತೇಷು ಸುರಭೀರ ಅಭಿಪಾಲಯನ್ತಂ**
**ಲಕ್ಷ್ಮೀ ಸಹಸ್ರ ಶತ ಸಂಭ್ರಮ ಸೇವ್ಯಮಾನಂ**
**ಗೋವಿಂದಮ್ ಆದಿ ಪುರುಷಂ ತಮ್ ಅಹಂ ಭಜಾಮಿ**

"ಗೋವುಗಳನ್ನು ಪಾಲಿಸುತ್ತಿರುವ ಪ್ರಥಮ ಪ್ರಜಾಪತಿಯಾದ, ಸಕಲ ಇಚ್ಛೆಗಳನ್ನು ಪೂರೈಸುತ್ತಿದ್ದು, ಲಕ್ಷೋಪಲಕ್ಷ ಕಲ್ಪ ವೃಕ್ಷಗಳಿಂದ ಸುತ್ತುವರಿದ, ಚಿಂತಾಮಣಿಗಳಿಂದ ನಿರ್ಮಿತ ಧಾಮಗಳಲ್ಲಿ, ಸದಾ ನೂರಾರು ಮತ್ತು ಸಹಸ್ರಾರು ಲಕ್ಷ್ಮಿಯರಿಂದ ಅಥವಾ ಗೋಪಿಯರಿಂದ ಮಹಾ ಗೌರವ ಮತ್ತು ಪ್ರೇಮದಿಂದ ಸೇವ್ಯನಾದ ಪರಮಾಧಿ ಪ್ರಭು ಗೋವಿಂದನನ್ನು ಭಜಿಸುತ್ತೇನೆ (ಬ್ರ. ಸಂ. 5.29).

ಇದು ಕೃಷ್ಣ ಲೋಕದ ವರ್ಣನೆ. ಅಲ್ಲಿ ಮನೆಗಳು "ನಿಕಷ"ವೆಂದು ಕರೆಯುವ ಶಿಲೆಯಿಂದ ನಿರ್ಮಿತವಾಗಿದೆ. ನಿಕಷವು ಸ್ಪರ್ಶಿಸಿದ್ದೆಲ್ಲ ತಕ್ಷಣ ಚಿನ್ನವಾಗುತ್ತದೆ.

ವೃಕ್ಷಗಳು "ಕಲ್ಪವೃಕ್ಷಗಳು" ಏಕೆಂದರೆ ಒಬ್ಬನು ತಾನು ಇಚ್ಛಿಸಿದ್ದನ್ನೆಲ್ಲ ಅವುಗಳಿಂದ ಪಡೆಯಬಹುದು. ಈ ಜಗತ್ತಿನಲ್ಲಿ ನಾವು ಮಾವಿನ ಮರಗಳಿಂದ ಮಾವುಗಳನ್ನು ಮತ್ತು ಸೇಬಿನ ಮರಗಳಿಂದ ಸೇಬುಗಳನ್ನು ಪಡೆಯಬಹುದು. ಆದರೆ ಅಲ್ಲಿ ಯಾವುದೇ ಮರದಿಂದ ಅವನು ಇಚ್ಛಿಸುವ ಏನನ್ನೂ ಪಡೆಯಬಹುದು. ಅದೇ ಪ್ರಕಾರ ಗೋವುಗಳನ್ನು ಸುರಭಿ ಎಂದು ಕರೆಯಲಾಗಿದೆ ಮತ್ತು ಅವು ಅಪಾರ ಹಾಲು ನೀಡುತ್ತವೆ. ಇವು ವೇದ ಸಾಹಿತ್ಯದಲ್ಲಿ ಕಂಡುಬರುವ ಕೃಷ್ಣಲೋಕದ ವರ್ಣನೆ.

ಈ ಭೌತಿಕ ಜಗತ್ತಿನಲ್ಲಿ ನಾವು ಜನನ, ಮರಣ ಮತ್ತು ಎಲ್ಲ ಬಗೆಯ ದುಃಖಗಳಿಗೆ ಒಗ್ಗಿ ಹೋಗಿದ್ದೇವೆ. ಭೌತವಾದಿ ವಿಜ್ಞಾನಿಗಳು ಲೈಂಗಿಕ ಭೋಗ ಮತ್ತು ವಿನಾಶಕ್ಕಾಗಿ ಅನೇಕ ಅನುಕೂಲಗಳನ್ನು ಕಂಡುಹಿಡಿದಿದ್ದಾರೆ, ಆದರೆ ವೃದ್ಧಾಪ್ಯ, ವ್ಯಾಧಿ ಮತ್ತು ಮರಣದ ಸಮಸ್ಯೆಗಳಿಗೆ ಅವರು ಯಾವ ಪರಿಹಾರವನ್ನೂ ಕಂಡುಕೊಂಡಿಲ್ಲ. ಮರಣ, ವೃದ್ಧಾಪ್ಯ ಅಥವಾ ವ್ಯಾಧಿಯನ್ನು ತಡೆಯುವಂತಹ ಯಾವುದೇ ಯಂತ್ರವನ್ನು ಅವರು ಮಾಡಲಾರರು. ಮರಣವನ್ನು ಮುಂದೂಡುವ ಏನನ್ನಾದರೂ ನಾವು ನಿರ್ಮಿಸಬಹುದು. ಆದರೆ ಮರಣವನ್ನು ತಡೆಯುವಂತಹ ಏನನ್ನೂ ನಿರ್ಮಿಸಲಾರೆವು. ಬುದ್ಧಿವಂತರಾದವರು ಭೌತಿಕ ಜೀವನದ ಕ್ಲೇಶ ಚತುಷ್ಟಯಗಳ ಬಗ್ಗೆ ಯೋಚಿಸುವುದಿಲ್ಲ. ಆದರೆ ಅಧ್ಯಾತ್ಮ ಲೋಕಗಳಿಗೆ ಉನ್ನತಿಸುವ ಯೋಚನೆ ಮಾಡುತ್ತಾರೆ. ಸಂತತ ಸಮಾಧಿಯಲ್ಲಿ ಇರುವವನು (ನಿತ್ಯ **ಯುಕ್ತಸ್ಯ ಯೋಗಿನಃ**) ತನ್ನ ಚಿತ್ತವನ್ನು ಬೇರೆಡೆಗೆ ಹೊರಳಿಸುವುದಿಲ್ಲ. ಅವನು ಸದಾ ಸಮಾಧಿ ಸ್ಥಿತನು. ಅವನ ಮನಸ್ಸು ವಿಚಲಿತವಾಗದೆ ಸದಾ ಕೃಷ್ಣನ ಚಿಂತನದಿಂದ ತುಂಬಿರುತ್ತದೆ. (**ಅನನ್ಯ ಚೇತಾಃ ಸತತಮ್**) **ಸತತಮ್** ಎಂಬುದು ಎಲ್ಲ ಕಡೆಯನ್ನು ಮತ್ತು ಎಲ್ಲ ಕಾಲವನ್ನು ಸೂಚಿಸುತ್ತದೆ.

ಭಾರತದಲ್ಲಿ ನಾನು ವೃಂದಾವನದಲ್ಲಿದ್ದೆನು ಮತ್ತು ಈಗ ಅಮೇರಿಕೆಯಲ್ಲಿದ್ದೇನೆ, ಹೀಗೆಂದ ಮಾತ್ರಕ್ಕೆ ನಾನು ವೃಂದಾವನದಿಂದ ದೂರವಿದ್ದೇನೆ ಎಂದು ಅರ್ಥವಲ್ಲ. ಏಕೆಂದರೆ ನಾನು ಸದಾ ಕೃಷ್ಣನನ್ನು ಚಿಂತಿಸಿದರೆ, ಆಗ ಭೌತಿಕ ಉಪಾದಿಗಳೇನೆ ಇರಲಿ, ನಾನು ಸದಾ ವೃಂದಾವನದಲ್ಲಿರುವೆನು. ಕೃಷ್ಣಪ್ರಜ್ಞೆ ಎಂದರೆ ಒಬ್ಬನು ಸದಾ ಆ ಅಧ್ಯಾತ್ಮ ಗ್ರಹದಲ್ಲಿ ಗೋಲೋಕ ವೃಂದಾವನದಲ್ಲಿ ಕೃಷ್ಣನೊಂದಿಗೆ ಇರುತ್ತಾನೆ ಮತ್ತು ಒಬ್ಬನು ಈ ಭೌತಿಕ ದೇಹವನ್ನು ತ್ಯಜಿಸಲು ಮಾತ್ರ ಕಾಯುತ್ತಿರುತ್ತಾನೆ. **ಸ್ಮರತಿ ನಿತ್ಯಶಃ** ಎಂದರೆ ಸಂತತ ಸ್ಮರಣೆ ಮಾಡುವುದು ಮತ್ತು ಸಂತತ ಕೃಷ್ಣನನ್ನು ಸ್ಮರಿಸುವವನಿಗೆ ಭಗವಂತನು **ತಸ್ಯಾಹಂ ಸುಲಭಃ** —ಸುಲಭವಾಗಿ ವಶವಾಗುತ್ತಾನೆ. **ಈ ಭಕ್ತಿಯೋಗ** ಪ್ರಕ್ರಿಯೆಯಿಂದ ತಾನು ಸುಲಭ ಲಭ್ಯನು ಎಂದು ಸ್ವಯಂ ಕೃಷ್ಣನು

ಹೇಳುತ್ತಾನೆ. ಹೀಗಿರುವಾಗ ನಾವು ಯಾವುದೇ ಇತರ ಪ್ರಕ್ರಿಯೆಯನ್ನು ಏಕೆ ಗ್ರಹಿಸಬೇಕು? ನಾವು ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ, ಹರೇ ಹರೇ ಮಂತ್ರವನ್ನು ದಿನವೂ ಇಪ್ಪತ್ತನಾಲ್ಕು ಗಂಟೆಗಳೂ ಜಪಿಸಬಹುದು. ಯಾವ ನಿಯಮ ನಿಯಂತ್ರಣಗಳಿಲ್ಲ. ಒಬ್ಬನು ಬೀದಿಯಲ್ಲಿ, ಉಪಬೀದಿಯಲ್ಲಿ ಅಥವಾ ತನ್ನ ಮನೆ ಅಥವಾ ಕಛೇರಿಯಲ್ಲಿ ಜಪಿಸಬಹುದು. ಯಾವ ತೆರಿಗೆಯಿಲ್ಲ ಮತ್ತು ಖರ್ಚೂ ಇಲ್ಲ. ಹೀಗಿರುವಾಗ ಅದನ್ನು ಏಕೆ ನಾವು ಅಂಗೀಕರಿಸಕೂಡದು?

# ಭೌತಿಕ ಗ್ರಹಗಳಿಂದ ಮುಕ್ತಿ

ಜ್ಞಾನಿಗಳು ಮತ್ತು ಯೋಗಿಗಳು ಸಾಮಾನ್ಯವಾಗಿ ವ್ಯಕ್ತಿಶೂನ್ಯವಾದಿಗಳು ಮತ್ತು ಅವರು ವ್ಯಕ್ತಿಶೂನ್ಯಜ್ಯೋತಿಯಲ್ಲಿ, ಆಧ್ಯಾತ್ಮ ಆಕಾಶದಲ್ಲಿ ಐಕ್ಯರಾಗಿ ಅನಿತ್ಯ ರೂಪದ ಮುಕ್ತಿಯನ್ನು ಪಡೆಯುವರಾದರೂ, ಅವರ ಜ್ಞಾನವು ಶ್ರೀಮದ್ಭಾಗವತಾನುಸಾರ ಶುದ್ಧವೆಂದು ಪರಿಗಣಿತವಾಗಿಲ್ಲ. ತಪಸ್ಸುಗಳಿಂದ ವ್ರತಗಳಿಂದ ಮತ್ತು ಧ್ಯಾನಗಳಿಂದ ಅವರು ಪರಮ ತತ್ತ್ವದ ವೇದಿಕೆಗೆ ಏರಬಹುದು. ಆದರೆ ಆಗಲೇ ವಿವರಿಸಿದಂತೆ ಅವರು ಮತ್ತೆ ಭೌತಿಕ ಜಗತ್ತಿಗೆ ಪತನ ಹೊಂದುತ್ತಾರೆ. ಏಕೆಂದರೆ ಅವರು ಕೃಷ್ಣನ ವ್ಯಕ್ತಿಗತ ಲಕ್ಷಣಗಳನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಒಬ್ಬನು ಕೃಷ್ಣನ ಪಾದಕಮಲಗಳನ್ನು ಅರ್ಚಿಸಿದ ಹೊರತು, ಅವನು ಮತ್ತೆ ಭೌತಿಕ ವೇದಿಕೆಗೆ ಬರಬೇಕಾಗುವುದು. ಆದರ್ಶ ಮನೋಭಾವವು ಹೀಗಿರಬೇಕು: "ನಾನು ನಿನ್ನ ನಿತ್ಯದಾಸನು, ದಯವಿಟ್ಟು ಹೇಗೋ ನಾನು ನಿನ್ನ ಸೇವೆಯಲ್ಲಿ ನಿರತನಾಗುವಂತೆ ಮಾಡು." ಕೃಷ್ಣನು ಅಜಿತ ಅಜೇಯನು. ಏಕೆಂದರೆ ಯಾರೂ ದೇವರನ್ನು ಜಯಿಸಲಾರರು. ಆದರೆ ಶ್ರೀಮದ್ಭಾಗವತ ಪ್ರಕಾರ ಒಬ್ಬನು ಈ ಭಾವದಿಂದ ಸುಲಭವಾಗಿ ಪರಮ ಪುರುಷನನ್ನು ಜಯಿಸುತ್ತಾನೆ. ಶ್ರೀಮದ್ಭಾಗವತವು ಕೂಡ ನಾವು ಪರಮಾತ್ಮನನ್ನು ಅಳೆಯುವ ಈ ವ್ಯರ್ಥ ಪ್ರಕ್ರಿಯೆಯನ್ನು ಬಿಟ್ಟುಕೊಡಬೇಕು ಎಂದು ಹೇಳುತ್ತದೆ. ನಾವು ಅಂತರಿಕ್ಷದ ಪರಿಮಿತಿಗಳನ್ನೂ ಅಳೆಯುವುದು ಸಾಧ್ಯವಾಗದು. ಹೀಗಿರುವಾಗ ಪರಮ ಪುರುಷನ ವಿಷಯ ಹೇಳುವುದೇನಿದೆ? ಒಬ್ಬನ ಅತ್ಯಲ್ಪ ಜ್ಞಾನದಿಂದ ಕೃಷ್ಣನ ಉದ್ದಳತೆಯನ್ನು ಅಳೆಯುವುದು ಅಸಂಭವ ಮತ್ತು ಈ ಸಿದ್ಧಾಂತಕ್ಕೆ ಬರುವವನು ಬುದ್ಧಿವಂತನೆಂದು ವೇದಸಾಹಿತ್ಯದಿಂದ ಪರಿಗಣಿತನು. ಒಬ್ಬನು ವಿನೀತನಾಗಿ, ತಾನು ಬ್ರಹ್ಮಾಂಡದ ಬಹು ಕ್ಷುದ್ರ ಕಣ ಎಂಬುದನ್ನು ಅರಿತುಕೊಳ್ಳಬೇಕು. ಪರಿಣತ ಜ್ಞಾನದಿಂದ ಅಥವಾ ಮಾನಸಿಕ ಊಹಾಪೋಹದಿಂದ ಪರಮ ಪುರುಷನನ್ನು ಅರಿತುಕೊಳ್ಳುವ ಪ್ರಯತ್ನವನ್ನು ಬಿಟ್ಟು, ನಾವು ವಿನೀತರಾಗಬೇಕು ಮತ್ತು ಭಗವದ್ಗೀತೆಯಂತಹ ಅಧಿಕೃತ ಮೂಲಗಳಿಂದ ಅಥವಾ ಸಾಕ್ಷಾತ್ಕೃತ ಆತ್ಮನ ಮುಖದಿಂದ ಪರಮ ಪುರುಷನನ್ನು ಕುರಿತು ಶ್ರವಣ ಮಾಡಬೇಕು.

ಭಗವದ್ಗೀತೆಯಲ್ಲಿ ಅರ್ಜುನನು ಭಗವಂತನ ಬಗ್ಗೆ ಸ್ವಯಂ ಶ್ರೀಕೃಷ್ಣನಿಂದಲೇ ಶ್ರವಣ ಮಾಡುತ್ತಾನೆ. ಈ ರೀತಿಯಲ್ಲಿ ಅರ್ಜುನನು, ವಿನೀತಭಾವದ ಶ್ರವಣದಿಂದ ಪರಮ ಪುರುಷನನ್ನು ಅರಿತುಕೊಳ್ಳುವ ತತ್ತ್ವವನ್ನು ಸ್ಥಾಪಿಸಿದನು. ನಾವು ಅರ್ಜುನನ ಮುಖದಿಂದ ಅಥವಾ ಅವನ ನಿಜಪ್ರತಿನಿಧಿಯಾದ ಗುರುಗಳ ಮುಖದಿಂದ ಭಗವದ್ಗೀತೆಯನ್ನು ಶ್ರವಣ ಮಾಡುವುದು ನಮ್ಮ ಸ್ಥಿತಿ. ಶ್ರವಣದ ಬಳಿಕ ಈ ಅರ್ಜಿತ ಜ್ಞಾನವನ್ನು ನಿತ್ಯ ಜೀವನದಲ್ಲಿ ಕಾರ್ಯಗತಗೊಳಿಸುವುದು ಅವಶ್ಯ. "ನನ್ನ ಪ್ರಿಯ ಪ್ರಭೋ, ನೀನು ಅಜೇಯನು" ಎಂದು ಭಕ್ತನು ಪ್ರಾರ್ಥಿಸುತ್ತಾನೆ, ಆದರೆ ಈ ಶ್ರವಣ ಪ್ರಕ್ರಿಯೆಯಿಂದ ನೀನು ಜಿತನು. ಭಗವಂತನು ಅಜೇಯನು, ಆದರೆ ಅವನು ಮಾನಸಿಕ ಊಹಾಪೋಹಗಳನ್ನು ತ್ಯಜಿಸಿ ಅಧಿಕೃತ ಮೂಲಗಳಿಂದ ಶ್ರವಣ ಮಾಡುವ ಭಕ್ತನಿಂದ ಜಯಿಸಲ್ಪಡುವನು.

ಬ್ರಹ್ಮಸಂಹಿತೆಯ ಪ್ರಕಾರ, ಜ್ಞಾನಾರ್ಜನೆಗೆ ಎರಡು ಮಾರ್ಗಗಳಿವೆ—ಒಂದು ಆರೋಹಣ ಪ್ರಕ್ರಿಯೆ ಮತ್ತೊಂದು ಅವರೋಹಣ ಪ್ರಕ್ರಿಯೆ. ಆರೋಹಣ ಪ್ರಕ್ರಿಯೆಯಿಂದ, ಒಬ್ಬನು ತಾನು ಅರ್ಜಿಸಿದ ಧ್ಯಾನದಿಂದ ಉನ್ನತಿಸುತ್ತಾನೆ. ಈ ರೀತಿಯಲ್ಲಿ, "ನಾನು ಯಾವ ಅಧಿಕಾರಗಳನ್ನು ಅಥವಾ ಗ್ರಂಥಗಳನ್ನೂ ಗಮನಿಸುವುದಿಲ್ಲ. ನಾನು ಜ್ಞಾನದಿಂದ ದರ್ಶನ ಇತ್ಯಾದಿಗಳ ಮೂಲಕ ಸ್ವಯಂ ಜ್ಞಾನ ಹೊಂದುತ್ತೇನೆ. ಈ ರೀತಿಯಲ್ಲೂ ಭಗವಂತನನ್ನು ಅರಿತುಕೊಳ್ಳುತ್ತೇನೆ" ಎಂದು ಯೋಚಿಸುತ್ತಾನೆ. ಮತ್ತೊಂದು ಪ್ರಕ್ರಿಯೆ ಅವರೋಹಣ ಪ್ರಕ್ರಿಯೆ, ಇದರಲ್ಲಿ ಮೇಲಿನ ಅಧಿಕಾರಿಗಳಿಂದ ಜ್ಞಾನ ಸ್ವೀಕರಿಸಲಾಗುತ್ತದೆ. ಒಬ್ಬನು ಆರೋಹಣ ಪ್ರಕ್ರಿಯೆಯನ್ನು ಗ್ರಹಿಸಿದರೆ ಮತ್ತು ಲಕ್ಷೋಪಲಕ್ಷ ವರ್ಷಗಳವರೆಗೆ ಮನೋವೇಗ ಮತ್ತು ವಾಯುವೇಗದಿಂದ ಚಲಿಸಿದರೆ, ಕೊನೆಗೂ ಅವನು ತಿಳಿಯದೆ ಉಳಿಯುತ್ತಾನೆ ಎಂದು ಬ್ರಹ್ಮಸಂಹಿತೆಯು ಹೇಳುತ್ತದೆ. ಅವನಿಗೆ, ವಿಷಯ ವಸ್ತುವು ಎಟುಕದ ಮತ್ತು ಅಚಿಂತ್ಯವಾದದ್ದು ಆಗಿರುವುದು. ಆದರೆ ಆ ವಿಷಯವನ್ನು ಭಗವದ್ಗೀತೆಯಲ್ಲಿ ಕೊಡಲಾಗಿದೆ. **ಅನನ್ಯ-ಚೇತಾಃ** ಕೃಷ್ಣನು ತನ್ನನ್ನು ಕುರಿತು, ಭಕ್ತಿಯುತ ಪಥದಿಂದ ವಿಚಲಿತರಾಗದೆ ವಿನಯದಲ್ಲಿ ಧ್ಯಾನ ಮಾಡುವಂತೆ ಹೇಳುತ್ತಾನೆ. ಈ ರೀತಿಯಲ್ಲಿ ಅವನನ್ನು ಆರಾಧಿಸುವವನು **ತಸ್ಯಾಹಂ ಸುಲಭಃ** "ನಾನು ಸುಲಭ ಲಭ್ಯನಾಗುತ್ತೇನೆ" ಇದೇ ಪ್ರಕ್ರಿಯೆ, ಒಬ್ಬನು ದಿನದ ಇಪ್ಪತ್ತನಾಲ್ಕು ಗಂಟೆಗಳು ಕೃಷ್ಣನಿಗಾಗಿ ಕಾರ್ಯ ಮಾಡಿದರೆ, ಕೃಷ್ಣನು ಅವನನ್ನು ಮರೆಯಲಾರನು. ವಿನೀತನಾಗಿ ಅವನು ಭಗವಂತನ ಗಮನವನ್ನು ಆಕರ್ಷಿಸಬಹುದು. ಗುರುಮಹಾರಾಜ ಭಕ್ತಿ ಸಿದ್ಧಾಂತ ಸರಸ್ವತಿಯವರು "ಭಗವಂತನನ್ನು ನೋಡಲು ಯತ್ನಿಸಬೇಡಿ. ನಾವು ಅವನನ್ನು

ನೋಡ ಬಯಸುವ ಮಾತ್ರದಿಂದ ದೇವರು ಸೇವಕನಂತೆ ಬಂದು ನಮ್ಮ ಮುಂದೆ ನಿಲ್ಲಬೇಕೆ? ಅದು ವಿನೀತ ಮಾರ್ಗವಲ್ಲ. ನಾವು ಅವನನ್ನು ಪ್ರೇಮ ಮತ್ತು ಸೇವೆಯಿಂದ ಆಭಾರಿಯನ್ನಾಗಿ ಮಾಡಬೇಕು" ಎಂದು ಹೇಳುತ್ತಿದ್ದರು.

ಕೃಷ್ಣನನ್ನು ಸೇರಲು ಯೋಗ್ಯ ಪ್ರಕ್ರಿಯೆಯು ಶ್ರೀ ಚೈತನ್ಯ ಮಹಾಪ್ರಭುಗಳಿಂದ ಮಾನವ ಕುಲಕ್ಕೆ ನೀಡಲ್ಪಟ್ಟಿತು ಮತ್ತು ಅವರ ಪ್ರಥಮ ಶಿಷ್ಯರಾದ ರೂಪ ಗೋಸ್ವಾಮಿಯವರು ಅದನ್ನು ಮೆಚ್ಚಿದರು. ರೂಪ ಗೋಸ್ವಾಮಿಯವರು ಮಹಮ್ಮದೀಯ ಸರಕಾರದಲ್ಲಿ ಮಂತ್ರಿಯಾಗಿದ್ದರು. ಆದರೆ ಅವರು ಚೈತನ್ಯ ಮಹಾಪ್ರಭುಗಳ ಶಿಷ್ಯರಾಗಲು ಸರಕಾರವನ್ನು ತ್ಯಜಿಸಿದರು. ಅವರು ಮೊದಲ ಸಲ ಪ್ರಭುಗಳನ್ನು ಕಾಣಲು ಹೋದಾಗ ರೂಪ ಗೋಸ್ವಾಮಿಯವರು ಈ ಕೆಳಗಿನ ಶ್ಲೋಕದಿಂದ ಅವರನ್ನು ಸ್ತುತಿಸಿದರು.



**ನಮೋ ಮಹಾ ವದಾನ್ಯಾಯ ಕೃಷ್ಣ ಪ್ರೇಮ ಪ್ರದಾಯತೇ**
**ಕೃಷ್ಣಾಯ ಕೃಷ್ಣ ಚೈತನ್ಯ ನಾಮ್ನೇ ಗೌರ ತ್ವಿಷೇ ನಮಃ**

"ಬೇರೆ ಯಾವುದೇ ಅವತಾರಕ್ಕಿಂತ ಸ್ವಯಂ ಕೃಷ್ಣನಿಗಿಂತ, ಹೆಚ್ಚು ಉದಾತ್ತನಾದ ಪರಮ ಪ್ರಭು ಶ್ರೀಕೃಷ್ಣ ಚೈತನ್ಯರಿಗೆ ನನ್ನ ಗೌರವ ನಮಸ್ಕಾರಗಳನ್ನು ಅರ್ಪಿಸುತ್ತೇನೆ, ಏಕೆಂದರೆ ಬೇರೆ ಯಾರೂ ಎಂದೂ ನೀಡದಂತಹ ಶುದ್ಧ ಕೃಷ್ಣ ಪ್ರೇಮವನ್ನು ಅವರು ಮುಕ್ತವಾಗಿ ನೀಡುತ್ತಿದ್ದಾರೆ." ರೂಪ ಗೋಸ್ವಾಮಿಯವರು ಚೈತನ್ಯ ಮಹಾಪ್ರಭುಗಳನ್ನು "ಅತ್ಯಂತ ಉದಾರಿ ಅತ್ಯಂತ ದಾನಶೀಲ ವ್ಯಕ್ತಿ" ಎಂದು ಕರೆದಿದ್ದಾರೆ. ಏಕೆಂದರೆ ಅವರು ಎಲ್ಲಕ್ಕಿಂತ ಅತ್ಯಂತ ಬೆಲೆಯುಳ್ಳ ವಸ್ತುವನ್ನು ಭಗವತ್ಪ್ರೇಮವನ್ನು ಬಹು ಅಗ್ಗವಾಗಿ ನೀಡುತ್ತಿದ್ದಾರೆ. ನಾವೆಲ್ಲರೂ ಕೃಷ್ಣನನ್ನು ಬಯಸುತ್ತೇವೆ ಮತ್ತು ಎಲ್ಲರೂ ಅವನ ತೃಷೆ ಹೊಂದಿದ್ದೇವೆ. ಕೃಷ್ಣನು ಅತ್ಯಂತ ಆಕರ್ಷಕನು ಮತ್ತು ಅತ್ಯಂತ ಸುಂದರನು, ಅತ್ಯಂತ ಐಶ್ವರ್ಯವಂತನು, ಅತ್ಯಂತ ಶಕ್ತಿಶಾಲಿ ಮತ್ತು ಅತ್ಯಂತ ಕೋವಿದನು. ಇದೇ ನಮ್ಮ ತೃಷೆಗೆ ವಸ್ತು. ನಾವು ಸುಂದರ, ಶಕ್ತಿಶಾಲಿ, ವಿದ್ವಾಂಸ, ಸಿರಿವಂತನಾದವನನ್ನು ಹೊಂದಬಯಸುತ್ತೇವೆ. ಕೃಷ್ಣನು ಈ ಎಲ್ಲವುಗಳ ನಿಧಿ, ಆದ್ದರಿಂದ ನಾವು ಅವನ ಕಡೆಗೆ ಗಮನ ತಿರುಗಿಸಬೇಕು ಅಷ್ಟೆ ಮತ್ತು ನಮಗೆ ಎಲ್ಲವೂ ದೊರೆಯುವುದು. ನಮ್ಮ ಹೃದಯದ ಇಚ್ಛೆ ಏನೇ ಇದ್ದರೂ ನಾವು ಬಯಸಿದ ಪ್ರತಿಯೊಂದೂ ಈ ಕೃಷ್ಣಪ್ರಜ್ಞಾ ಪ್ರಕ್ರಿಯೆಯಿಂದ ಪೂರೈಸುತ್ತದೆ.

ಹಿಂದೆ ಹೇಳಿದಂತೆ, ಕೃಷ್ಣಪ್ರಜ್ಞೆಯಲ್ಲಿ ಮರಣ ಹೊಂದುವವನಿಗೆ, ಕೃಷ್ಣನು ವಾಸಿಸುವ ಪರಮ ಧಾಮವಾದ ಕೃಷ್ಣಲೋಕ ಪ್ರವೇಶವು ಸುನಿಶ್ಚಿತ. ಈ ಘಟ್ಟದಲ್ಲಿ ಆ ಲೋಕಕ್ಕೆ ಹೋಗುವುದರಲ್ಲಿ ಏನು ಪ್ರಯೋಜನವಿದೆ ಎಂದು ಕೇಳಬಹುದು ಮತ್ತು ಸ್ವಯಂ ಕೃಷ್ಣನು ಉತ್ತರಿಸುತ್ತಾನೆ:

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್**
**ನಾಪ್ನುವನ್ತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ**

"ನನ್ನನ್ನು ಸೇರಿದ ಬಳಿಕ, ಭಕ್ತಿಯಲ್ಲಿನ ಯೋಗಿಗಳಾದ ಮಹಾತ್ಮರು ಕ್ಲೇಶಮಯವಾದ ಈ ಅಶಾಶ್ವತ ಜಗತ್ತಿಗೆ, ಹಿಂದಿರುಗುವುದಿಲ್ಲ. ಏಕೆಂದರೆ ಅವರು ಅತ್ಯುನ್ನತ ಪರಿಪೂರ್ಣತೆಯನ್ನು ಹೊಂದಿರುತ್ತಾರೆ" (ಭ. ಗೀ. 8.15).

ಈ ಭೌತಿಕ ಜಗತ್ತು ಸೃಷ್ಟಿಕರ್ತನಾದ ಶ್ರೀಕೃಷ್ಣನಿಂದ **ದುಃಖಾಲಯಮ್**—ಕ್ಲೇಶಮಯ ಎಂದು ಪ್ರಮಾಣಿತವಾಗಿದೆ. ಹೀಗಿದ್ದೂ ನಾವು ಅದನ್ನು ಹೇಗೆ ಸುಖಕರವಾಗಿ ಮಾಡಬಹುದು? ವೈಜ್ಞಾನಿಕ ಬೆಳವಣಿಗೆ ಎನಿಸಿಕೊಳ್ಳುವುದರಿಂದ ಈ ಜಗತ್ತನ್ನು ಸುಖಕರವಾಗಿ ಮಾಡುವುದು ಸಾಧ್ಯವೆ? ಇಲ್ಲ, ಇದು ಸಾಧ್ಯವಿಲ್ಲ. ಪರಿಣಾಮವಾಗಿ, ಈ ಕ್ಲೇಶಗಳು ಯಾವುವು ಎಂಬುದನ್ನು ತಿಳಿಯಲು ಕೂಡ ನಾವು ಬಯಸುವುದಿಲ್ಲ. ಮುಂಚೆ ಹೇಳಿದಂತೆ, ಜನನ, ಮುಪ್ಪು, ವ್ಯಾಧಿ ಮತ್ತು ಮರಣ ಇವು ಕ್ಲೇಶಗಳು ಮತ್ತು ನಾವು ಅವುಗಳಿಗೆ ಪರಿಹಾರ ಹುಡುಕುವುದು ಸಾಧ್ಯವಿಲ್ಲವಾದ್ದರಿಂದ ನಾವು ಅವುಗಳನ್ನು ಬದಿಗೆ ತಳ್ಳಲು ಯತ್ನಿಸುತ್ತೇವೆ. ನಮಗೆ ಸದಾ ತೊಂದರೆ ಕೊಡುವ ಈ ಕ್ಲೇಶಗಳಿಗೆ ಪರಿಹಾರ ನೀಡಲು ವಿಜ್ಞಾನಕ್ಕೆ ಶಕ್ತಿಯಿಲ್ಲ. ಬದಲಾಗಿ ಅವು ಅಂತರಿಕ್ಷ ನೌಕೆಗಳನ್ನು ಅಥವಾ ಅಣುಬಾಂಬುಗಳನ್ನು ತಯಾರಿಸುವ ಕಡೆಗೆ ನಮ್ಮ ಗಮನವನ್ನು ಹರಿಸುತ್ತವೆ, ಈ ಸಮಸ್ಯೆಗಳಿಗೆ ಪರಿಹಾರವು ಇಲ್ಲಿ **ಭಗವದ್ಗೀತೆ**ಯಲ್ಲಿ ನೀಡಲ್ಪಟ್ಟಿದೆ, ಒಬ್ಬನು ಕೃಷ್ಣ ವೇದಿಕೆಗೆ ಏರಿದರೆ ಅವನು ಮತ್ತೆ ಜನನ ಮರಣಗಳ ಈ ಭೂಮಿಗೆ ಹಿಂದಿರುಗಬೇಕಿಲ್ಲ. ಈ ಸ್ಥಳವು ಕ್ಲೇಶಮಯ ಎಂಬುದನ್ನು ಅರಿತುಕೊಳ್ಳಲು ನಾವು ಯತ್ನಿಸಬೇಕು. ಇದನ್ನು ಅರಿತುಕೊಳ್ಳಲು ಕೆಲಮಟ್ಟಿನ ಅಭಿವೃದ್ಧಿ ಪ್ರಜ್ಞೆ ಬೇಕು. ಬೆಕ್ಕು ನಾಯಿಗಳು ಮತ್ತು ಹಂದಿಗಳು ತಾವು ದುಃಖಪಡುತ್ತಿದ್ದೇವೆ ಎಂಬುದನ್ನು ಅರಿಯಲಾರವು. ಮಾನವನನ್ನು ವಿಚಾರವಂತ ಪ್ರಾಣಿ ಎಂದು ಕರೆಯಲಾಗಿದೆ. ಆದರೆ ಅವನ ವಿಚಾರಪರತೆಯು, ಈ ಕ್ಲೇಶಮಯ ಸ್ಥಿತಿಯಿಂದ ಹೇಗೆ ಬಿಡುಗಡೆ ಹೊಂದಬೇಕು ಎಂಬುದನ್ನು ಕಂಡುಕೊಳ್ಳುವ ಬದಲು ಅವನ ಪಾಶವೀ ಪ್ರವೃತ್ತಿಗಳನ್ನು ಹೆಚ್ಚಿಸುವಲ್ಲಿ ಉಪಯೋಗಿಸಲಾಗಿದೆ. ತನ್ನಲ್ಲಿಗೆ

ಬರುವವನು ಕ್ಲೇಶಗಳನ್ನು ಅನುಭವಿಸಲು ಮತ್ತೆ ಎಂದೂ ಹುಟ್ಟುವುದಿಲ್ಲ ಎಂದು ಇಲ್ಲಿ ಕೃಷ್ಣನು ಸ್ಪಷ್ಟವಾಗಿ ಹೇಳುತ್ತಾನೆ. ಅವನಲ್ಲಿಗೆ ಬರುವ ಆ ಮಹಾತ್ಮರು, ಜೀವಿಯನ್ನು ಬದ್ಧ ಅಸ್ತಿತ್ವದ ದುಃಖದಿಂದ ಮೇಲೆತ್ತುವ ಅತ್ಯುನ್ನತ ಜೀವನದ ಪರಿಪೂರ್ಣತೆಯನ್ನು ಹೊಂದಿದ್ದಾರೆ.

ಕೃಷ್ಣ ಮತ್ತು ಸಾಮಾನ್ಯ ಜೀವಿಯಲ್ಲಿರುವ ವ್ಯತ್ಯಾಸಗಳಲ್ಲಿ ಒಂದೆಂದರೆ ಸಾಮಾನ್ಯ ಜೀವಿಯು ಒಂದು ಕಾಲದಲ್ಲಿ ಒಂದು ಕಡೆಗೆ ಮಾತ್ರ ಇರಬಹುದು. ಆದರೆ ಕೃಷ್ಣನು ಬ್ರಹ್ಮಾಂಡದಲ್ಲಿ ಪ್ರತಿಯೊಂದು ಕಡೆಯಲ್ಲಿ ಇರಬಲ್ಲನು. ಆದರೂ ಅದೇ ಕಾಲದಲ್ಲಿ ತನ್ನ ಧಾಮದಲ್ಲಿಯೂ ಇರಬಲ್ಲನು. ದಿವ್ಯ ಸಾಮ್ರಾಜ್ಯದಲ್ಲಿನ ಕೃಷ್ಣಧಾಮವನ್ನು ಗೋಲೋಕ ಬೃಂದಾವನ ಎಂದು ಕರೆಯಲಾಗಿದೆ. ಭಾರತದಲ್ಲಿರುವ ವೃಂದಾವನವು ಈ ಭೂಮಿಗೆ ಇಳಿದ ಅದೇ ವೃಂದಾವನ. `ಕೃಷ್ಣನು ತನ್ನ ಅಂತರಂಗ ಶಕ್ತಿಯಿಂದ ಸ್ವಯಂ ಅವತರಿಸಿದಾಗ, ಅವನ ಧಾಮವು ಕೂಡ ಇಳಿದು ಬರುತ್ತದೆ' ಎಂದರೆ, ಕೃಷ್ಣನು ಈ ಭೂಮಿಯ ಮೇಲೆ ಇಳಿದು ಬಂದಾಗ ಆ ವಿಶಿಷ್ಟ ಭೂಮಿಯಲ್ಲಿ ಸ್ವಯಂ ವ್ಯಕ್ತನಾಗುತ್ತಾನೆ. ಹೀಗಿದ್ದರೂ ಕೃಷ್ಣನ ಧಾಮವು ದಿವ್ಯ ಆಲಯದಲ್ಲಿ, ವೈಕಂಠಗಳಲ್ಲಿ ಶಾಶ್ವತವಾಗಿ ಉಳಿದಿರುತ್ತದೆ. ವೈಕುಂಠಗಳಲ್ಲಿ ತನ್ನ ಧಾಮಕ್ಕೆ ಬರುವವನು ಮತ್ತೆ ಭೌತಿಕ ಜಗತ್ತಿನಲ್ಲಿ ಎಂದೂ ಜನ್ಮವೆತ್ತಬೇಕಿಲ್ಲ ಎಂದು ಕೃಷ್ಣನು ಈ ಶ್ಲೋಕದಲ್ಲಿ ಸಾರುತ್ತಾನೆ. ಅಂತಹ ವ್ಯಕ್ತಿಯನ್ನು ಮಹಾತ್ಮ ಎಂದು ಕರೆಯಲಾಗಿದೆ. ಮಹಾತ್ಮ ಪದವು ಸಾಮಾನ್ಯವಾಗಿ ಪಶ್ಚಿಮದಲ್ಲಿ ಮಹಾತ್ಮ ಗಾಂಧಿಯ ಸಂಬಂಧದಲ್ಲಿ ಕೇಳಿಬರುತ್ತಿದೆ. ಆದರೆ ಮಹಾತ್ಮ ಎಂಬುದು ಒಬ್ಬ ರಾಜಕಾರಣಿಯ ಹೆಸರು ಅಲ್ಲ ಎಂದು ನಾವು ಅರಿತುಕೊಳ್ಳಬೇಕು. ಬದಲಾಗಿ ಮಹಾತ್ಮ ಎಂಬುದು ಕೃಷ್ಣಧಾಮದಲ್ಲಿ ಪ್ರವೇಶಿಸಲು ಅರ್ಹನಾದ ಪ್ರಥಮ ವರ್ಗದ ಕೃಷ್ಣಪ್ರಾಜ್ಞೆಯನ್ನು ಸೂಚಿಸುತ್ತದೆ. ಮಹಾತ್ಮನ ಪರಿಪೂರ್ಣತೆ ಹೀಗಿದೆ: ಮಾನವ ಜನ್ಮವನ್ನು ಮತ್ತು ಪ್ರಕೃತಿಯ ಸಂಪನ್ಮೂಲಗಳನ್ನು ಜನನ ಮರಣಗಳ ಚಕ್ರದಿಂದ ತನ್ನನ್ನು ಬಿಡಿಸಿಕೊಳ್ಳಲು ಉಪಯೋಗಿಸುವುದು.

ಬುದ್ಧಿವಂತನು ತಾನು ಕ್ಲೇಶ ಬಯಸುವುದಿಲ್ಲ ಎಂದು ತಿಳಿದಿರುತ್ತಾನೆ, ಆದರೆ ಅವು ಬಲವಂತವಾಗಿ ಅವನ ಮೇಲೆ ಹೇರಲ್ಪಡುತ್ತವೆ. ಮುಂಚೆ ಹೇಳಿದಂತೆ, ಈ ಮನಸ್ಸು, ದೇಹ ನೈಸರ್ಗಿಕ ಕ್ಷೋಭೆಗಳು ಅಥವಾ ಇತರ ಜೀವಿಗಳ ನಿಮಿತ್ತ ನಾವು ಸದಾ ಕ್ಲೇಶ ಸ್ಥಿತಿಯಲ್ಲಿ ಇರುತ್ತೇವೆ. ಯಾವಾಗಲೂ ನಮ್ಮ ಮೇಲೆ ಒಂದಿಲ್ಲೊಂದು ಬಗೆಯ ಕ್ಲೇಶವು ಹೇರಲ್ಪಡುತ್ತವೆ. ಈ ಭೌತಿಕ ಜಗತ್ತು ಕ್ಲೇಶಕ್ಕೆ ಉದ್ದಿಷ್ಟ. ಕ್ಲೇಶವು ಇದ್ದ ಹೊರತು, ನಾವು ಕೃಷ್ಣಪ್ರಜ್ಞೆಗೆ ಬರಲಾರೆವು. ಕ್ಲೇಶಗಳು ವಾಸ್ತವಿಕವಾಗಿ

ಒಂದು ಪ್ರೋತ್ಸಾಹನ ಮತ್ತು ನಮ್ಮನ್ನು ಕೃಷ್ಣಪ್ರಜ್ಞೆಗೆ ಉನ್ನತಿಸಲು ಸಹಾಯ ಮಾಡುತ್ತವೆ. ಈ ಕ್ಲೇಶಗಳು ಬಲವಂತವಾಗಿ ಏಕೆ ತನ್ನ ಮೇಲೆ ಹೇರಲ್ಪಡುತ್ತವೆ ಎಂದು ಒಬ್ಬ ಬುದ್ಧಿವಂತನು ಪ್ರಶ್ನಿಸುತ್ತಾನೆ, ಆದರೆ ಆಧುನಿಕ ನಾಗರಿಕತೆಯ ಮನೋಧರ್ಮ ಹೀಗಿದೆ: "ದುಃಖ ಅನುಭವಿಸುತ್ತೇನೆ, ಅದನ್ನು ಯಾವುದೋ ಮಾದಕ ವಸ್ತು ಸೇವನೆಯಿಂದ ಮರೆಮಾಡುತ್ತೇನೆ ಅಷ್ಟೆ" ಆದರೆ ಮಾದಕದ ಪರಿಣಾಮವು ಮುಗಿದೊಡನೆಯೇ ಕ್ಲೇಶಗಳು ಮರುಕಳಿಸುತ್ತವೆ. ಕೃತಕ ಮದ್ಯಪಾನದಿಂದ ಜೀವನದ ಕ್ಲೇಶಗಳಿಗೆ ಪರಿಹಾರ ಕಾಣುವುದು ಸಾಧ್ಯವಿಲ್ಲ. ಕೃಷ್ಣಪ್ರಜ್ಞೆಯಿಂದ ಪರಿಹಾರ ಸಾಧ್ಯ.

ಕೃಷ್ಣನ ಭಕ್ತರು ಕೃಷ್ಣಲೋಕವನ್ನು ಪ್ರವೇಶಿಸಲು ಯತ್ನಿಸುವರಾದರೂ, ಚಂದ್ರಲೋಕಕ್ಕೆ ಹೋಗುವುದರಲ್ಲಿ ನಮ್ಮ ಆಸಕ್ತಿ ಎಂದು ಒಬ್ಬನು ಹೇಳಬಹುದು. ಚಂದ್ರಲೋಕಕ್ಕೆ ಹೋಗುವುದು ಕೂಡ ಪರಿಪೂರ್ಣತೆಯಲ್ಲವೇ? ಇತರ ಗ್ರಹಗಳಿಗೆ ಯಾತ್ರೆ ಮಾಡುವ ಪ್ರಣವತೆಯು ಜೀವಿಯಲ್ಲಿ ಸದಾ ಸನ್ನಿಹಿತ. ಜೀವಿಗೆ ಸರ್ವಗತ ಎಂಬುದೊಂದು ಹೆಸರುಂಟು. ಎಂದರೆ "ಪ್ರತಿಯೊಂದು ಕಡೆಯಲ್ಲಿ ಸಂಚರಿಸಬಯಸುವವನು" ಎಂದು ಅರ್ಥ. ಸಂಚಾರವೂ ಜೀವಿಯ ಸ್ವಭಾವದ ಭಾಗ. ಚಂದ್ರಲೋಕಕ್ಕೆ ಹೋಗುವ ಇಚ್ಛೆಯು ಹೊಸದೇನಲ್ಲ. ಯೋಗಿಗಳು ಕೂಡ ಊರ್ಧ್ವ ಗ್ರಹಗಳನ್ನು ಪ್ರವೇಶಿಸಲು ಆಸಕ್ತರು, ಆದರೆ ಇದರಿಂದ ಯಾವ ಸಹಾಯವಿಲ್ಲ ಎಂದು ಭಗವದ್ಗೀತೆಯಲ್ಲಿ ಕೃಷ್ಣನು ಹೇಳುತ್ತಾನೆ.

ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ
ಮಾಮುಪೇತ್ಯ ತು ಕೌನ್ತೇಯ ಪುನರ್ಜನ್ಮ ನ ವಿದ್ಯತೇ

"ಭೌತಿಕ ಜಗತ್ತಿನಲ್ಲಿ ಅತ್ಯುನ್ನತ ಲೋಕದಿಂದ ಅಧೋಲೋಕದವರೆಗೆ ಎಲ್ಲವೂ ಪುನರಾವರ್ತಿತ ಹುಟ್ಟು ಮತ್ತು ಸಾವುಗಳಲ್ಲಿರುವ ಕ್ಲೇಶದ ನೆಲೆಗಳು. ಆದರೆ ಹೇ ಕುಂತಿ ಪುತ್ರನೇ, ನನ್ನ ಧಾಮವನ್ನು ಸೇರಿದವನು ಎಂದಿಗೂ ಮತ್ತೆ ಜನಿಸುವುದಿಲ್ಲ" (ಭ. ಗೀ. 8.16).

ಬ್ರಹ್ಮಾಂಡವು ಊರ್ಧ್ವ, ಮಧ್ಯ ಮತ್ತು ಅಧೋಗ್ರಹವ್ಯೂಹಗಳಲ್ಲಿ ವಿಭಜಿತ. ಭೂಮಿಯನ್ನು ಮಧ್ಯ ಗ್ರಹವ್ಯೂಹದ ಭಾಗವೆಂದು ಪರಿಗಣಿಸಲಾಗಿದೆ. ಒಬ್ಬನು ಎಲ್ಲಕ್ಕಿಂತ ಅತ್ಯುನ್ನತವಾದ ಬ್ರಹ್ಮಲೋಕವೆಂಬ ಗ್ರಹವನ್ನು ಪ್ರವೇಶಿಸಿದರೂ ಕೂಡ ಅಲ್ಲಿ, ಜನನ ಮರಣಗಳ ಪುನರಾವೃತ್ತಿ ಇದೆ ಎಂದು ಕೃಷ್ಣನು ಹೇಳುತ್ತಾನೆ. ಬ್ರಹ್ಮಾಂಡದಲ್ಲಿ ಇತರ ಗ್ರಹಗಳು ಜೀವಿಗಳಿಂದ ತುಂಬಿವೆ. ನಾವು ಇಲ್ಲಿ ಇರುವೆವು, ಇತರ ಗ್ರಹಗಳೆಲ್ಲ ಖಾಲಿ ಇವೆ ಎಂದು ಭಾವಿಸಕೂಡದು. ಅನುಭವದಿಂದ

ಭೂಮಿಯ ಮೇಲೆ ಯಾವ ಸ್ಥಳವೂ ಜೀವಿಗಳಿಲ್ಲದೆ ಇಲ್ಲ ಎಂದು ನಾವು ಕಾಣಬಹುದು. ನಾವು ಭೂಮಿಯನ್ನು ಆಳವಾಗಿ ಅಗೆದರೆ ಅಲ್ಲಿ ಹುಳುಗಳನ್ನು ಕಾಣುತ್ತೇವೆ; ಆಕಾಶದಲ್ಲಿ ಹೋದರೆ, ಅನೇಕ ಪಕ್ಷಿಗಳನ್ನು ಕಾಣುತ್ತೇವೆ. ಹೀಗಿರುವಾಗ ಇತರ ಗ್ರಹಗಳಲ್ಲಿ ಯಾವ ಜೀವಿಗಳೂ ಇಲ್ಲ ಎಂದು ನಿರ್ಣಯಿಸುವುದು ಹೇಗೆ? ಮಹಾ ಮಹಾ ದೇವತೆಗಳು ವಾಸಿಸುವ ಗ್ರಹಗಳಲ್ಲಿ ನಾವು ಪ್ರವೇಶಿಸಿದರೂ ಕೂಡ, ನಾವು ಮರಣಕ್ಕೆ ಗುರಿಯಾಗುತ್ತೇವೆ ಎಂದು ಕೃಷ್ಣನು ಹೇಳುತ್ತಾನೆ. ಅವನ ಲೋಕವನ್ನು ತಲುಪಿದ ಮೇಲೆ ಒಬ್ಬನು ಮತ್ತೆ ಹುಟ್ಟಬೇಕಿಲ್ಲ ಎಂದು ಕೃಷ್ಣನು ಮತ್ತೊಮ್ಮೆ ಹೇಳುತ್ತಾನೆ.

ನಾವು ಜ್ಞಾನಾನಂದಮಯವಾದ ನಮ್ಮ ಶಾಶ್ವತ ಜೀವನವನ್ನು ಹೊಂದಲು ಬಹು ಗಂಭೀರರಾಗಿರಬೇಕು. ಇದು ನಮ್ಮ ನಿಜ ಸ್ವಹಿತವಾದ ನಮ್ಮ ಜೀವನದ ವಾಸ್ತವಿಕ ಗುರಿ ಎಂಬುದನ್ನು ಮರೆತಿದ್ದೇವೆ. ನಾವು ಏಕೆ ಮರೆತಿದ್ದೇವೆ? ನಾವು ಎಷ್ಟೇ ದೊಡ್ಡ ಗಗನಚುಂಬೀ ಕಟ್ಟಡಗಳನ್ನು ಕಟ್ಟಿ ಇಲ್ಲಿ ಬಹು ಕಾಲದವರೆಗೂ ಇರಲಾರೆವು ಎಂದು ತಿಳಿದಿದ್ದರೂ, ನಾವು ಭೌತಿಕ ಥಳಕಿನಿಂದ, ಗಗನಚುಂಬಿಗಳಿಂದ, ದೊಡ್ಡ ದೊಡ್ಡ ಕಾರ್ಖಾನೆಗಳಿಂದ ಮತ್ತು ರಾಜಕೀಯ ಆಟದಿಂದ ಸುಮ್ಮನೆ ಬಲೆಗೆ ಸಿಕ್ಕಿದ್ದೇವೆ. ನಮ್ಮನ್ನು ಭೌತಿಕ ಪ್ರಕೃತಿಯಲ್ಲಿ ಮತ್ತಷ್ಟು ಸಿಲುಕಿಸಿಕೊಳ್ಳಲು ದೊಡ್ಡ ದೊಡ್ಡ ಕಾರ್ಖಾನೆಗಳನ್ನು ಮತ್ತು ನಗರಗಳನ್ನು ನಿರ್ಮಿಸುವಲ್ಲಿ ನಮ್ಮ ಶಕ್ತಿಯನ್ನು ಹಾಳುಮಾಡಿಕೊಳ್ಳಕೂಡದು. ಬದಲಾಗಿ ಕೃಷ್ಣಲೋಕವನ್ನು ಪ್ರವೇಶಿಸಬಹುದಾದ ಆಧ್ಯಾತ್ಮ ದೇಹವನ್ನು ಹೊಂದಲೋಸುಗ ಕೃಷ್ಣಪ್ರಜ್ಞೆಯನ್ನು ಬೆಳೆಸಿಕೊಳ್ಳಲು ನಮ್ಮ ಶಕ್ತಿಯನ್ನು ಉಪಯೋಗಿಸಬೇಕು. ಕೃಷ್ಣಪ್ರಜ್ಞೆಯು ಒಂದು ಧರ್ಮ ಸೂತ್ರದಲ್ಲಿ ಅಥವಾ ಯಾವುದೋ ಆಧ್ಯಾತ್ಮಿಕ ಮನೋರಂಜನೆ ಅಲ್ಲ; ಅದು ಜೀವಿಯ ಅತ್ಯಂತ ಮಹತ್ವದ ಭಾಗ.

# ಪರವ್ಯೋಮ

ಈ ಬ್ರಹ್ಮಾಂಡದಲ್ಲಿಯ ಊರ್ಧ್ವಗ್ರಹಗಳು ಕೂಡ ಜನನ ಮರಣಕ್ಕೆ ಒಳಪಟ್ಟಿದ್ದರೆ. ಅಲ್ಲಿಗೆ ಉನ್ನತಿ ಹೊಂದಲು ಏಕೆ ಮಹಾಯೋಗಿಗಳು ಯತ್ನಿಸುತ್ತಾರೆ? ಅವರು ಅನೇಕ ಯೋಗಸಿದ್ಧಿಗಳನ್ನು ಹೊಂದಿರಬಹುದಾಗಿದ್ದರೂ ಈ ಯೋಗಿಗಳು ಇನ್ನೂ ಭೌತಿಕ ಜೀವನದ ಅನುಕೂಲಗಳನ್ನು ಭೋಗಿಸಬಯಸುವ ಪ್ರಣವತೆ ಹೊಂದಿರುತ್ತಾರೆ. ಊರ್ಧ್ವಲೋಕಗಳಲ್ಲಿ, ನಂಬಲಾಗದಷ್ಟು ದೀರ್ಘಕಾಲದವರೆಗೆ ಜೀವಿಸುವುದು ಸಂಭವವಿದೆ. ಈ ಗ್ರಹಗಳಲ್ಲಿಯ ಕಾಲ ಗಣನೆಯನ್ನು ಶ್ರೀಕೃಷ್ಣನು ಸೂಚಿಸುತ್ತಾನೆ.

**ಸಹಸ್ರಯುಗಪರ್ಯನ್ತ ಮಹರ್ಯದ್ ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಾಸ್ರಾನ್ತಾಂ ತೇऽಹೋರಾತ್ರವಿದೋ ಜನಾಃ ॥**

'ಮಾನವರ ಲೆಕ್ಕಾಚಾರದಂತೆ ಒಟ್ಟಾಗಿ ತೆಗೆದುಕೊಂಡ ಒಂದು ಸಾವಿರ ಯುಗಗಳು ಬ್ರಹ್ಮನ ಒಂದು ಹಗಲು ಮತ್ತು ಅವನ ರಾತ್ರಿಯ ಅವಧಿಯೂ ಸಹ ಅಂತಹುದೇ ಆಗಿದೆ" (ಭ. ಗೀ. 8.17).

ನಮ್ಮ ಯುಗವು 4,300,000 ವರ್ಷಗಳನ್ನು ಒಳಗೊಂಡಿದೆ. ಈ ಸಂಖ್ಯೆಯು ಒಂದು ಸಾವಿರದಿಂದ ಗುಣಿತವಾಗಿ ಬ್ರಹ್ಮಲೋಕದಲ್ಲಿ ಬ್ರಹ್ಮನ ಹನ್ನೆರಡು ಗಂಟೆಗಳಷ್ಟು ಎಂದು ಪರಿಗಣಿತವಾಗಿದೆ. ಅದೇ ಪ್ರಕಾರ ಮತ್ತೆ ಹನ್ನೆರಡು ಗಂಟೆಗಳ ಅವಧಿ ರಾತ್ರಿ. ಅಂತಹ ಮೂವತ್ತು ದಿನಗಳು ಒಂದು ತಿಂಗಳು, ಹನ್ನೆರಡು ತಿಂಗಳುಗಳು ಒಂದು ವರ್ಷ ಮತ್ತು ಬ್ರಹ್ಮನು ಅಂತಹ ಒಂದು ನೂರು ವರ್ಷ ಜೀವಿಸುತ್ತಾನೆ. ಅಂತಹ ಗ್ರಹದಲ್ಲಿಯ ಆಯುರ್ಮಾನವು ನಿಜವಾಗಿಯೂ ದೀರ್ಘವಾಗಿದೆ. ಆದರೂ ಕೋಟ್ಯಂತರ ವರ್ಷಗಳ ತರುವಾಯವೂ, ಬ್ರಹ್ಮಲೋಕ ನಿವಾಸಿಗಳು ಮರಣವನ್ನು ಇದಿರಿಸಬೇಕಾಗುವುದು. ನಾವು ಅಧ್ಯಾತ್ಮಲೋಕಗಳಿಗೆ ಹೋದ ಹೊರತು ಮರಣವನ್ನು ತಪ್ಪಿಸಿಕೊಳ್ಳುವಂತಿಲ್ಲ.

**ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವನ್ತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತಸಂಜ್ಞಕೇ ॥**

"ಬ್ರಹ್ಮನ ಹಗಲಿನ ಪ್ರಾರಂಭದಲ್ಲಿ ಎಲ್ಲ ಜೀವಿಗಳು ಅವ್ಯಕ್ತ ಸ್ಥಿತಿಯಿಂದ ವ್ಯಕ್ತವಾಗುತ್ತವೆ ಮತ್ತು ಆಮೇಲೆ ರಾತ್ರಿಯಾದಾಗ ಮತ್ತೆ ಅವು ಅವ್ಯಕ್ತದಲ್ಲಿ ಲೀನವಾಗುತ್ತವೆ" (ಭ.ಗೀ. 8.18).

ಬ್ರಹ್ಮನ ದಿನದ ಕೊನೆಯಲ್ಲಿ, ಎಲ್ಲಾ ಅಧೋ ಗ್ರಹವ್ಯೂಹಗಳು ಜಲಾವೃತವಾಗುತ್ತವೆ ಮತ್ತು ಅವುಗಳಲ್ಲಿರುವ ಜೀವಿಗಳು ನಾಶವಾಗುತ್ತವೆ. ಈ ಪ್ರಳಯದ ಅನಂತರ ಮತ್ತು ಬ್ರಹ್ಮನ ರಾತ್ರಿಯು ಕಳೆದ ಮೇಲೆ, ಬೆಳಗಿನಲ್ಲಿ ಬ್ರಹ್ಮನು ಎದ್ದಾಗ, ಮತ್ತೆ ಸೃಷ್ಟಿ ನಡೆಯುತ್ತದೆ ಮತ್ತು ಈ ಜೀವಿಗಳೆಲ್ಲ ಹೊರಬರುತ್ತಾರೆ. ಹೀಗೆ ಭೌತಿಕ ಜಗತ್ತಿನ ಪ್ರಕೃತಿಯು ಸೃಷ್ಟಿ ಮತ್ತು ಲಯಕ್ಕೆ ಒಳಪಟ್ಟಿದೆ.

ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥

"ಮತ್ತೆ ಮತ್ತೆ ಬ್ರಹ್ಮನ ಹಗಲು ಬಂದಾಗ ಎಲ್ಲ ಜೀವಿಗಳು ಅಸ್ತಿತ್ವಕ್ಕೆ ಬರುತ್ತಾರೆ ಮತ್ತು ಬ್ರಹ್ಮನ ರಾತ್ರಿಯ ಆಗಮನದೊಂದಿಗೆ ನಿಸ್ಸಹಾಯಕರಾಗಿ ನಾಶ ಮಾಡಲ್ಪಡುತ್ತಾರೆ" (ಭ. ಗೀ. 8.19).

ಜೀವಿಗಳು ನಾಶ ಬಯಸುವುದಿಲ್ಲವಾದರೂ, ಪ್ರಳಯವು ಬಂದೇ ಬರುತ್ತದೆ ಮತ್ತು ಇಡೀ ಬ್ರಹ್ಮನ ರಾತ್ರಿಯಲ್ಲಿ ಗ್ರಹಗಳ ಮೇಲಿನ ಜೀವಿಗಳೆಲ್ಲ ನೀರಿನಲ್ಲಿ ಮುಳುಗುವವರೆಗೆ ಜಲಪ್ರವಾಹ ಸೂಸುತ್ತದೆ. ಆದರೆ ಹಗಲು ಬಂದಾಗ ನೀರು ಕ್ರಮೇಣ ಅದೃಶ್ಯವಾಗುತ್ತದೆ.

ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥

"ಈ ವ್ಯಕ್ತ ಮತ್ತು ಅವ್ಯಕ್ತ ಜಡಕ್ಕಿಂತ ದಿನವೂ ಮತ್ತು ಸನಾತನವೂ ಆದ ಮತ್ತೊಂದು ಅನಭಿವ್ಯಕ್ತ ಪ್ರಕೃತಿ ಇದೆ. ಅದು ಪರಮ ಮತ್ತು ಎಂದಿಗೂ ಅವಿನಾಶಿ, ಈ ಜಗತ್ತಿನಲ್ಲಿನ ಎಲ್ಲವೂ ನಾಶವಾದಾಗ ಆ ಭಾಗವು ಇದ್ದಂತೆಯೇ ಇರುತ್ತದೆ" (ಭ. ಗೀ. 8.20).

ನಾವು ಭೌತಿಕ ಬ್ರಹ್ಮಾಂಡದ ವಿಸ್ತಾರವನ್ನು ಗಣನೆ ಮಾಡಲಾರೆವು. ಆದರೆ ಇಡೀ ಸೃಷ್ಟಿಯಲ್ಲಿ ಲಕ್ಷೋಪಲಕ್ಷ ಬ್ರಹ್ಮಾಂಡಗಳು ಇವೆ ಎಂದು ನಮಗೆ ವೇದಗಳು ತಿಳಿಸುತ್ತವೆ ಮತ್ತು ಈ ಭೌತಿಕ ಬ್ರಹ್ಮಾಂಡಗಳಾಚೆಗೆ ಆಧ್ಯಾತ್ಮಿಕವಾದ ಮತ್ತೊಂದು ಆಕಾಶವಿದೆ. ಅಲ್ಲಿ ಎಲ್ಲಾ ಗ್ರಹಗಳು ಶಾಶ್ವತ ಮತ್ತು ಅಲ್ಲಿರುವ ಎಲ್ಲಾ ಜೀವಿಗಳ

ಜೀವನಗಳು ಶಾಶ್ವತ. ಈ ಶ್ಲೋಕದಲ್ಲಿ ಭಾವಃ ಎಂದರೆ ಪ್ರಕೃತಿ ಮತ್ತು ಇಲ್ಲಿ ಮತ್ತೊಂದು ಪ್ರಕೃತಿಯು ಸೂಚಿತವಾಗಿದೆ. ಈ ಜಗತ್ತಿನಲ್ಲಿ ನಾವು ಎರಡು ಪ್ರಕೃತಿಗಳ ಅನುಭವ ಕೂಡ ಹೊಂದಿದ್ದೇವೆ. ಜೀವಿಯು ಚೇತನ ಮತ್ತು ಅವನು ಜಡದಲ್ಲಿ ಇರುವವರೆಗೆ ಜಡವು ಚಲಿಸುತ್ತದೆ ಮತ್ತು ಅಧ್ಯಾತ್ಮ ಕಿಡಿಯಾದ ಜೀವಿಯು ದೇಹದಿಂದ ಹೊರಗೆ ಹೋದೊಡನೆಯೇ, ಶರೀರವು ಅಚಲವಾಗುತ್ತದೆ. ಅಧ್ಯಾತ್ಮ ಪ್ರಕೃತಿಯನ್ನು ಕೃಷ್ಣನ ಪರಾ ಪ್ರಕೃತಿ ಎಂದು ಕರೆಯಲಾಗಿದೆ ಮತ್ತು ಜಡವು ಅಪರಾ ಎಂದು ಕರೆಯಲಾಗಿದೆ. ಈ ಭೌತಿಕ ಪ್ರಕೃತಿಯ ಮೇಲೆ ಸಮಗ್ರ ಆಧ್ಯಾತ್ಮಿಕವಾದ ಪರಾ ಪ್ರಕೃತಿ ಇದೆ. ಇದನ್ನು ಪ್ರಾಯೋಗಿಕ ಜ್ಞಾನದಿಂದ ಅರಿತುಕೊಳ್ಳುವುದು ಸಾಧ್ಯವಿಲ್ಲ. ನಾವು ದೂರದರ್ಶಕದ ಮೂಲಕ ಲಕ್ಷೋಪಲಕ್ಷ ನಕ್ಷತ್ರಗಳನ್ನು ಕಾಣಬಹುದು, ಆದರೆ ಅವುಗಳ ಬಳಿಗೆ ಹೋಗಲಾರೆವು. ನಾವು ನಮ್ಮ ಅಸಮರ್ಥತೆಗಳನ್ನು ಅರಿತುಕೊಳ್ಳಬೇಕು. ನಾವು ಪ್ರಾಯೋಗಿಕ ಜ್ಞಾನದ ಮೂಲಕ ಭೌತಿಕ ಬ್ರಹ್ಮಾಂಡವನ್ನು ಅರಿತುಕೊಳ್ಳಲಾರೆವಾದರೆ, ದೇವರನ್ನು ಮತ್ತು ಅವನ ಸಾಮ್ರಾಜ್ಯವನ್ನು ಅರಿತುಕೊಳ್ಳುವ ಸಾಧ್ಯತೆ ಏನು? ಅದು ಪ್ರಾಯೋಗಿಕವಾಗಿ ಸಾಧ್ಯವಿಲ್ಲ. ಭಗವದ್ಗೀತೆಯ ಶ್ರವಣದಿಂದ ನಾವು ಅರಿತುಕೊಳ್ಳಬೇಕು. ನಮ್ಮ ತಂದೆ ಯಾರು ಎಂಬುದನ್ನು ಪ್ರಾಯೋಗಿಕ ಜ್ಞಾನದಿಂದ ನಾವು ಅರಿತುಕೊಳ್ಳಲಾರೆವು. ನಮ್ಮ ತಾಯಿಯ ಮಾತು ಕೇಳಿ ಅವಳನ್ನು ನಂಬಬೇಕು. ನಾವು ಅವಳನ್ನು ನಂಬದಿದ್ದರೆ ತಿಳಿಯಲು ಮಾರ್ಗವೇ ಇಲ್ಲ. ನಾವು ಕೃಷ್ಣಪ್ರಜ್ಞೆ ವಿಧಾನಕ್ಕೆ ಅಂಟಿಕೊಂಡರೆ ಸಾಕು, ಕೃಷ್ಣನ ಬಗ್ಗೆ ಮತ್ತು ಅವನ ಸಾಮ್ರಾಜ್ಯದ ಎಲ್ಲ ವಿಷಯವು ತಿಳಿಯುವುದು.

**ಪರಸ್ತು ಭಾವಃ** ಎಂದರೆ "ಪರಾ ಪ್ರಕೃತಿ" ಮತ್ತು "ಅವ್ಯಕ್ತಃ" ಎಂಬುದು ನಾವು ಕಾಣದ್ದನ್ನು ಸೂಚಿಸುತ್ತದೆ. ಭೌತಿಕ ಬ್ರಹ್ಮಾಂಡವು ಪೃಥ್ವಿ, ಸೂರ್ಯ, ನಕ್ಷತ್ರಗಳು ಮತ್ತು ಗ್ರಹಗಳ ಮೂಲಕ ವ್ಯಕ್ತ ಎಂಬುದನ್ನು ನಾವು ಕಾಣಬಹುದು. ಈ ಬ್ರಹ್ಮಾಂಡದಾಚೆಗೆ ಒಂದು ಶಾಶ್ವತ ಪ್ರಕೃತಿಯಾದ ಮತ್ತೊಂದು ಪ್ರಕೃತಿ ಇದೆ. **ಅವ್ಯಕ್ತಾತ್ ಸನಾತನಃ** ಈ ಭೌತಿಕ ಪ್ರಕೃತಿಯು ಆದಿ ಮತ್ತು ಅಂತ್ಯಗಳನ್ನು ಹೊಂದಿದೆ, ಆದರೆ ಆ ಆಧ್ಯಾತ್ಮಿಕ ಪ್ರಕೃತಿಯು **ಸನಾತನಃ** ಶಾಶ್ವತವಾದುದು. ಅದಕ್ಕೆ ಆದಿ ಅಥವಾ ಅಂತ್ಯ ಇಲ್ಲ, ಇದು ಹೇಗೆ ಸಾಧ್ಯ? ಆಕಾಶದಲ್ಲಿ ಮೋಡವು ಹಾಯ್ದು ಹೋಗಬಹುದು ಮತ್ತು ಅದು ಬಹು ದೂರ ಆವರಿಸಿದಂತೆ ತೋರಬಹುದು. ಆದರೆ ವಾಸ್ತವಿಕವಾಗಿ ಅದು ಇಡೀ ಆಕಾಶದ ಅತ್ಯಲ್ಪ ಭಾಗವನ್ನು ಮಾತ್ರ ಆವರಿಸಿರುತ್ತದೆ. ನಾವು ಬಹಳಷ್ಟು ಅಲ್ಪರಾಗಿರುವುದರಿಂದ, ಕೆಲವು ಮೈಲಿಗಳಷ್ಟು

ಮೇಘಾವೃತವಾಗಿದ್ದರೂ ಇಡೀ ಆಕಾಶವು ಆವರಿಸಿದಂತೆ ತೋರುತ್ತದೆ. ಅದೇ ಪ್ರಕಾರ ಈ ಇಡೀ ಭೌತಿಕ ಬ್ರಹ್ಮಾಂಡವು ಅಪಾರ ಆಧ್ಯಾತ್ಮಿಕ ಆಕಾರದಲ್ಲಿ ಒಂದು ಅತ್ಯಲ್ಪ ಮೇಘ. ಅದು **ಮಹತ್ ತತ್ತ್ವ**, ಜಡದಿಂದ ಆವೃತ. ಮೇಘಕ್ಕೆ ಆದಿ ಮತ್ತು ಅಂತ್ಯವಿರುವಂತೆ ಈ ಭೌತಿಕ ಪ್ರಕೃತಿಯು ಕೂಡ ಆದಿ ಮತ್ತು ಅಂತ್ಯವುಳ್ಳದ್ದು. ಮೋಡಗಳು ಚದುರಿದಾಗ ಮತ್ತು ಆಕಾಶವು ನಿರಭ್ರವಾಗಿದ್ದಾಗ, ನಾವು ಪ್ರತಿಯೊಂದನ್ನೂ ಯಥಾರೂಪವಾಗಿ ಕಾಣುತ್ತೇವೆ. ಅದೇ ಪ್ರಕಾರ, ಈ ದೇಹವು ಚೇತನಾತ್ಮನ ಮೇಲೆ ಹಾಯ್ದು ಹೋಗುವ ಒಂದು ಮೋಡ. ಅದು ಕೆಲ ಕಾಲ ಇರುತ್ತದೆ. ಕೆಲವೊಂದು ಉಪೋತ್ಪತ್ತಿಗಳನ್ನು ನೀಡುತ್ತದೆ, ಕುಸಿಯುತ್ತದೆ ಮತ್ತು ಅದೃಶ್ಯವಾಗುತ್ತದೆ. ನಾವು ಕಾಣುವ ಯಾವುದೇ ಭೌತಿಕ ಅಸಾಧಾರಣ ವಸ್ತುವು ಈ ಆರು ಭೌತಿಕ ಪ್ರಕೃತಿಯ ರೂಪಾಂತರಗಳಿಗೆ ಒಳಪಟ್ಟಿದೆ. ಅದು ಅಸ್ತಿತ್ವಕ್ಕೆ ಬರುತ್ತದೆ, ಬೆಳೆಯುತ್ತದೆ, ಕೆಲ ಕಾಲ ಇರುತ್ತದೆ, ಕೆಲವು ಉಪೋತ್ಪತ್ತಿಗಳನ್ನು ಉತ್ಪತ್ತಿ ಮಾಡುತ್ತದೆ, ಕುಸಿಯುತ್ತದೆ, ಆಮೇಲೆ ನಾಶವಾಗುತ್ತದೆ. ಹೀಗೆ ಮೇಘದಂತೆ ಬದಲಾಯಿಸುವ ಪ್ರಕೃತಿಯ ಆಚೆಗೆ ಶಾಶ್ವತವಾದ ಆಧ್ಯಾತ್ಮಿಕ ಪ್ರಕೃತಿ ಇದೆ ಎಂದು ಕೃಷ್ಣನು ಸೂಚಿಸುತ್ತಾನೆ. ಇದಲ್ಲದೆ ಈ ಭೌತಿಕ ಪ್ರಕೃತಿಯು ನಾಶವಾದಾಗ, ಆ **ಅವ್ಯಕ್ತಃ ಸನಾತನಃ** ಉಳಿಯುತ್ತದೆ.

ವೇದ ಸಾಹಿತ್ಯದಲ್ಲಿ ಭೌತಿಕ ಮತ್ತು ಆಧ್ಯಾತ್ಮಿಕ ಆಕಾಶಗಳ ಕುರಿತು ಸಾಕಷ್ಟು ವಿವರಣೆ ಇದೆ. ಶ್ರೀಮದ್ಭಾಗವತದ ಎರಡನೆಯ ಸ್ಕಂಧದಲ್ಲಿ ಆಧ್ಯಾತ್ಮಿಕ ಆಕಾಶದ ಮತ್ತು ಅದರ ನಿವಾಸಿಗಳ ವರ್ಣನೆಗಳು ಇವೆ. ಆಧ್ಯಾತ್ಮಿಕ ಆಕಾಶದಲ್ಲಿ ಆಧ್ಯಾತ್ಮಿಕ ವಿಮಾನಗಳು ಇವೆ ಮತ್ತು ಅಲ್ಲಿಯ ಮುಕ್ತಜೀವಿಗಳು ಈ ವಿಮಾನಗಳಲ್ಲಿ ಮಿಂಚಿನಂತೆ ಸಂಚರಿಸುತ್ತಾರೆ ಎಂಬ ಬಗ್ಗೆ ಮಾಹಿತಿಯೂ ಇದೆ. ಇಲ್ಲಿ ಸಿಕ್ಕುವ ಪ್ರತಿಯೊಂದು ಕೂಡ ಅಲ್ಲಿ ನಿಜವಾಗಿರುವಂತೆ ಕಾಣಬಹುದು. ನಾವು ಇಲ್ಲಿ ಭೌತಿಕ ಆಕಾಶದಲ್ಲಿ ಪ್ರತಿಯೊಂದು ಆಧ್ಯಾತ್ಮಿಕ ಆಕಾಶದಲ್ಲಿ ಇರುವುದರ ಅನುಕರಣ ಅಥವಾ ಛಾಯೆ. ಸಿನಿಮಾದಲ್ಲಿಯಂತೆ ನಾವು ನಿಜ ವಸ್ತುವಿನ ಛಾಯೆ ಅಥವಾ ತದ್‌ರೂಪವನ್ನು ಮಾತ್ರ ಕಾಣಬಹುದು. ಶ್ರೀಮದ್ಭಾಗವತದಲ್ಲಿ ಈ ಭೌತಿಕ ಜಗತ್ತು ಸತ್ಯದ ಮಾದರಿಯ ಮೇಲೆ ತಯಾರಿಸಿದ ಜಡ ಸಂಯೋಜನೆ ಎಂದು ಹೇಳಲಾಗಿದೆ. ಒಂದು ಅಂಗಡಿಯ ಕಿಟಕಿಯಲ್ಲಿ ಒಂದು ಹುಡುಗಿಯ ಪ್ರತಿಕೃತಿ ಇರುವಂತೆ, ಆ ಪ್ರತಿಕೃತಿಯು ಒಂದು ಗೊಂಬೆ ಎಂಬುದನ್ನು ಪ್ರತಿಯೊಬ್ಬ ಸರಳ ಮಾನವನು ತಿಳಿದಿರುತ್ತಾನೆ. ಆಧ್ಯಾತ್ಮ ಜಗತ್ತು ನಿಜವಾದುದು ಆಗಿರುವುದರಿಂದ, ಈ ಜಗತ್ತು ಅದರ ಅನುಕರಣವಾಗಿದ್ದು ನಿಜವೆಂದು ತೋರುತ್ತದೆ ಎಂದು ಶ್ರೀಧರ

ಸ್ವಾಮಿಗಳು ಹೇಳುತ್ತಾರೆ. ನಾವು ನಿಜವಾದ ಅರ್ಥವನ್ನು ಅರಿತುಕೊಳ್ಳಬೇಕು— ನಿಜವಾದುದು ಎಂದರೆ ಅಸ್ತಿತ್ವದಲ್ಲಿರುವುದು ಮತ್ತು ನಾಶವಾಗದಿರುವುದು. ನಿಜತ್ವ ಎಂದರೆ ಶಾಶ್ವತತೆ.

ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೆ ಸತಃ ।
ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವ ದರ್ಶಿಭಿಃ ॥

"ಅನಾಸ್ತಿತ್ವವಾದುದರ ಸಂಸ್ಥಿತಿಯು ಇಲ್ಲ ಮತ್ತು ನಿತ್ಯವಾದುದರ ಬದಲಾವಣೆ ಇಲ್ಲ ಎಂದು ತತ್ತ್ವದರ್ಶಿಗಳಾದವರು ನಿರ್ಣಯಿಸಿದ್ದಾರೆ. ಇವೆರಡರ ಸ್ವಭಾವವನ್ನು ಪರಿಶೀಲಿಸಿ ಅವರು ಇದನ್ನು ನಿರ್ಣಯಿಸಿದ್ದಾರೆ" (ಭ. ಗೀ. 2.16).

ನಿಜ ಆನಂದ ಕೃಷ್ಣ, ಆದರೆ ಅನಿತ್ಯ ಭೌತಿಕ ಆನಂದವು ವಾಸ್ತವಿಕವಾದುದಲ್ಲ ವಸ್ತುಗಳನ್ನು ಇರುವಂತೆ ಕಾಣುವವರು ಛಾಯಾನಂದದಲ್ಲಿ ಭಾಗವಹಿಸುವುದಿಲ್ಲ. ಆಧ್ಯಾತ್ಮ ಆಕಾಶವನ್ನು ಪಡೆಯುವುದು ಮಾನವ ಜನ್ಮದ ನಿಜ ಉದ್ದೇಶ, ಆದರೆ ಶ್ರೀಮದ್ಭಾಗವತವು ಸೂಚಿಸುವಂತೆ ಅನೇಕ ಜನ ಅದನ್ನು ತಿಳಿದಿಲ್ಲ. ನಿಜವನ್ನು ಅರಿತುಕೊಳ್ಳಲು ಮತ್ತು ಅದರಲ್ಲಿ ವರ್ಗಾವಣೆ ಹೊಂದಲು ಮಾನವ ಜನ್ಮವು ಉದ್ದಿಷ್ಟವಾಗಿದೆ. ನಾವು ಈ ಅಂಧಕಾರದಲ್ಲಿ ಉಳಿಯಕೂಡದು ಎಂದು ಸಕಲ ವೇದಸಾಹಿತ್ಯವು ಬೋಧಿಸುತ್ತದೆ. ಈ ಭೌತಿಕ ಜಗತ್ತಿನ ಸ್ವಭಾವವು ಅಂಧಕಾರ, ಆದರೆ ಆಧ್ಯಾತ್ಮ ಜಗತ್ತು ಪ್ರಕಾಶಪೂರ್ಣ. ಆದರೂ ಅಗ್ನಿಯಿಂದಾಗಲಿ ಅಥವಾ ವಿದ್ಯುತ್ತಿನಿಂದಾಗಲಿ ಅದು ಪ್ರಕಾಶಿತವಲ್ಲ. ಕೃಷ್ಣನು ಈ ಬಗ್ಗೆ ಭಗವದ್ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಸೂಚಿಸುತ್ತಾನೆ.

ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥

"ಆ ನನ್ನ ಪರಮ ಧಾಮವು ಸೂರ್ಯ ಅಥವಾ ಚಂದ್ರ ಅಥವಾ ಅಗ್ನೀ ಅಥವಾ ವಿದ್ಯುತ್ತಿನಿಂದ ಬೆಳಗುವುದಿಲ್ಲ. ಅಲ್ಲಿಗೆ ಹೋದವರು ಮತ್ತೆ ಈ ಭೌತಿಕ ಜಗತ್ತಿಗೆ ಮರಳುವುದಿಲ್ಲ" (ಭ. ಗೀ. 15.6).

ಆಧ್ಯಾತ್ಮಿಕ ಜಗತ್ತನ್ನು ಭೌತಿಕ ಇಂದ್ರಿಯಗಳಿಂದ ಕಾಣಲಾಗದು. ಆದ್ದರಿಂದ ಅದನ್ನು ಅವ್ಯಕ್ತ ಎಂದು ಕರೆಯಲಾಗಿದೆ.

ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।
ಯಂ ಪ್ರಾಪ್ಯ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥

"ವೇದಾಂತಿಗಳು ಯಾವುದನ್ನು ಅವ್ಯಕ್ತ ಮತ್ತು ಅಮೋಘ ಎಂದು ವರ್ಣಿಸುವರೋ, ಯಾವುದು ಪರಮಗಮ್ಯ ಸ್ಥಾನವೆಂದು ತಿಳಿಯಲ್ಪಡುವುದೋ, ಯಾವುದನ್ನು ಒಬ್ಬನು ಸೇರಿದಾಗ, ಅವನು ಎಂದಿಗೂ ಹಿಂದಿರುಗುವುದಿಲ್ಲವೋ—ಅದುವೇ ನನ್ನ ಪರಮ ಧಾಮ" (ಭ. ಗೀ. 8.21).

ಈ ಶ್ಲೋಕದಲ್ಲಿ ಒಂದು ಮಹಾ ಪ್ರಸ್ಥಾನವನ್ನು ಸೂಚಿಸಲಾಗಿದೆ. ನಾವು ಬಾಹ್ಯಾಂತರಿಕ್ಷವನ್ನು ಭೇದಿಸಲು ಶಕ್ತರಾಗಬೇಕು, ಭೌತಿಕ ಬ್ರಹ್ಮಾಂಡವನ್ನು ಸಂಚರಿಸಬೇಕು. ಅದರ ಕವಚವನ್ನು ಭೇದಿಸಬೇಕು ಮತ್ತು ಅಧ್ಯಾತ್ಮ ಆಕಾಶವನ್ನು ಪ್ರವೇಶಿಸಬೇಕು. **ಪರಮಾಂ ಗತಿಂ** ಈ ಪ್ರಯಾಣವು ಪರಮವಾದುದು. ಈ ಗ್ರಹದಿಂದ ಕೆಲವು ಸಾವಿರ ಮೈಲು ಹೋಗಿ ಮತ್ತೆ ಹಿಂದಿರುಗುವ ಪ್ರಶ್ನೆ ಇಲ್ಲ. ಇಂತಹ ಪ್ರವಾಸವು ಶೌರ್ಯದ ಪ್ರಶ್ನೆಯೇನಲ್ಲ. ನಾವು ಇಡೀ ಭೌತಿಕ ಬ್ರಹ್ಮಾಂಡವನ್ನು ಭೇದಿಸಿಕೊಂಡು ಹೋಗಬೇಕು. ನಾವು ಇದನ್ನು ಅಂತರಿಕ್ಷ ನೌಕೆಗಳ ಮೂಲಕ ಸಾಧಿಸಲಾರೆವು, ಆದರೆ ಕೃಷ್ಣಪ್ರಜ್ಞೆಯ ಮೂಲಕ ಸಾಧ್ಯ. ಕೃಷ್ಣಪ್ರಜ್ಞೆಯಲ್ಲಿ ಮಗ್ನನಾದವನು ಮತ್ತು ಮರಣ ಕಾಲದಲ್ಲಿ ಕೃಷ್ಣನ ಚಿಂತನ ಮಾಡುವವನು ತಕ್ಷಣ ಅಲ್ಲಿಗೆ ವರ್ಗಾಯಿತನಾಗುವನು. ನಾವು ಆ ಆಧ್ಯಾತ್ಮಿಕ ಆಕಾಶಕ್ಕೆ ಹೋಗಬಯಸುವುದೇ ಆದರೆ ಮತ್ತು ಜ್ಞಾನಮಯವಾದ ಶಾಶ್ವತ ಆನಂದಮಯ ಜೀವನವನ್ನು ಬೆಳಸ ಬಯಸಿದರೆ, ನಾವು ಈಗ ಸಚ್ಚಿದಾನಂದ ದೇಹದ ಅಭ್ಯಾಸ ಪ್ರಾರಂಭಿಸಬೇಕು. ಕೃಷ್ಣನು ಸಚ್ಚಿದಾನಂದ ದೇಹೀ—**ಈಶ್ವರಃ ಪರಮಃ ಕೃಷ್ಣ ಸಚ್ಚಿದಾನಂದ ವಿಗ್ರಹಃ** —ಮತ್ತು ನಾವು ಕೂಡ ನಿತ್ಯ ಜ್ಞಾನಾನಂದಮಯ ದೇಹ ಹೊಂದಿದ್ದೇವೆ; ಆದರೆ ಅದು ಬಹು ಚಿಕ್ಕದು ಮತ್ತು ಜಡ ಕವಚದಿಂದ ಆವೃತವಾಗಿದೆ. ನಾವು ಹೇಗೋ ಈ ಸುಳ್ಳು ಕವಚವನ್ನು ತ್ಯಜಿಸಲು ಶಕ್ತರಾದರೆ, ನಾವು ಆ ಅಧ್ಯಾತ್ಮ ಸಾಮ್ರಾಜ್ಯವನ್ನು ತಲುಪಬಹುದು. ನಾವು ಒಂದು ಸಲ ಆ ಅಧ್ಯಾತ್ಮ ಜಗತ್ತನ್ನು ಹೊಂದಬಹುದಾದರೆ, ಅಲ್ಲಿಂದ ಮರಳುವ ಆಗತ್ಯವಿಲ್ಲ (**ಯಂ ಪ್ರಾಪ್ಯ ನ ನಿವರ್ತಂತೇ**).

ಆದ್ದರಿಂದ ಪ್ರತಿಯೊಬ್ಬನು ಆ **ಧಾಮಪರಮಮಂ** ಕೃಷ್ಣನ ಪರಮಧಾಮಕ್ಕೆ ಹೋಗಲು ಯತ್ನಿಸಬೇಕು. ನಮ್ಮನ್ನು ಕರೆಯಲು ಸ್ವಯಂ ಕೃಷ್ಣನೇ ಬರುತ್ತಾನೆ ಮತ್ತು ಅವನು ನಮಗೆ ಮಾರ್ಗದರ್ಶಕ ಸಾಹಿತ್ಯವನ್ನು ನೀಡುತ್ತಾನೆ ಮತ್ತು ತನ್ನ ನಿಜ ಪ್ರತಿನಿಧಿಗಳನ್ನು ಕಳುಹಿಸುತ್ತಾನೆ. ಮಾನವರಿಗೆ ನೀಡಿದ ಈ ಸೌಲಭ್ಯದ ಪ್ರಯೋಜನವನ್ನು ನಾವು ಪಡೆದುಕೊಳ್ಳಬೇಕು. ಆ ಪರಮಧಾಮವನ್ನು ತಲುಪಿದವನಿಗೆ ತಪಸ್ಸು, ವ್ರತಗಳು, ಯೋಗ, ಧ್ಯಾನಗಳು ಮೊದಲಾದವುಗಳು ಆ

ಮುಂದೆ ಅಗತ್ಯವಿಲ್ಲ. ಅದನ್ನು ತಲುಪಿದವನಿಗೆ ಎಲ್ಲಾ ತಪಸ್ಸು ಮತ್ತು ವ್ರತಗಳು ವ್ಯರ್ಥ ಕಾಲಹರಣ. ಮಾನವ ಜನ್ಮವು ಈ ವರವನ್ನು ಪಡೆಯಲು ಒಂದು ಅವಕಾಶ ಮತ್ತು ಈ ಮಾನವ ಜನ್ಮವನ್ನು ಪಡೆದವರನ್ನು ಜೀವನದ ಈ ಪರಿಪೂರ್ಣತೆಯನ್ನು ಹೊಂದಲು ಉನ್ನತಿಸುವುದು ರಾಜ್ಯ, ತಂದೆ ತಾಯಿಗಳು, ಶಿಕ್ಷಕರು ಮತ್ತು ಸಂರಕ್ಷಕರ ಕರ್ತವ್ಯ. ಕೇವಲ ಬೆಕ್ಕು ನಾಯಿಗಳಂತೆ ಆಹಾರ ನಿದ್ರಾ, ಮೈಥುನ ಮತ್ತು ಕದನ ನಾಗರಿಕತೆಯಲ್ಲ. ನಾವು ಮಾನವ ಜನ್ಮವನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕು ಮತ್ತು ದಿನದ ಇಪ್ಪತ್ತುನಾಲ್ಕು ಗಂಟೆಗಳೂ ಕೃಷ್ಣನಲ್ಲಿ ಮಗ್ನರಾಗಿರಲು ಮತ್ತು ಮರಣ ಸಂಭವಿಸಿದಾಗ ಕೂಡಲೇ ಆಧ್ಯಾತ್ಮಿಕ ಆಕಾಶಕ್ಕೆ ವರ್ಗಾಯಿತರಾಗಲು ಕೃಷ್ಣಪ್ರಜ್ಞೆಯಲ್ಲಿ ನಮ್ಮನ್ನು ಸಿದ್ಧಗೊಳಿಸಿಕೊಳ್ಳಲು ಈ ಜ್ಞಾನದ ಪ್ರಯೋಜನ ಪಡೆಯಬೇಕು.

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾನ್ತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥

"ಎಲ್ಲರಿಗಿಂತಲೂ ದೊಡ್ಡವನಾದ ಪರಮ ದೇವೋತ್ತಮ ಪುರುಷನು ಶುದ್ಧ ಭಕ್ತಿಯಿಂದ ಲಭ್ಯನು. ಅವನು ತನ್ನ ಧಾಮದಲ್ಲಿ ಇದ್ದರೂ, ಅವನು ಸರ್ವವ್ಯಾಪಿ ಮತ್ತು ಪ್ರತಿಯೊಂದೂ ಅವನಲ್ಲಿ ಸನ್ನಿವೇಶಿತವಾಗಿದೆ" (ಭ. ಗೀ. 8.22).

ನಾವು ಆ ಪರಮ ಧಾಮವನ್ನು ತಲುಪುವಲ್ಲಿ ಆಸಕ್ತರೇ ಆಗಿದ್ದರೆ ಇಲ್ಲಿ ಸೂಚಿಸಿದಂತೆ ಭಕ್ತಿಯು ಆ ಪ್ರಕ್ರಿಯೆ. ಭಕ್ತ್ಯಾ ಎಂದರೆ ಭಕ್ತಿಯುತ ಸೇವೆ. ಪರಮ ಪ್ರಭುವಿಗೆ ವಿನೀತರಾಗುವುದು. ಭಕ್ತ್ಯಾ ಪದದ ಮೂಲ ಭಜ ಎಂದರೆ ಸೇವೆ. ನಾರದ ಪಂಚರಾತ್ರದಲ್ಲಿ ಕೊಟ್ಟ ಭಕ್ತಿಯ ಪರಿಭಾಷೆ ಎಂದರೆ "ಉದಾಧಿ ಮುಕ್ತಿ." ದೇಹ ಬದಲಾದಾಗಲೆಲ್ಲ ಬದಲಾಗುತ್ತಿರುವ ಮತ್ತು ದೇಹನಿಮಿತ್ತವಾದ, ಶುದ್ಧ ಜೀವಾತ್ಮನಿಗೆ ಅಂಟಿಕೊಂಡಿರುವ ಸಕಲೋಪಾಧಿಗಳಿಂದ ಪಾರಾಗಲು ಒಬ್ಬನು ಕೃತನಿಶ್ಚಯನಾದರೆ ಅವನು ಭಕ್ತಿಯನ್ನು ಹೊಂದಬಹುದು. ಒಬ್ಬನು ಶುದ್ಧ ಚೇತನನು ಮತ್ತು ಸರ್ವಥಾ ಜಡವಲ್ಲ ಎಂಬ ಸಾಕ್ಷಾತ್ಕಾರವು ಭಕ್ತಿ. ನಮ್ಮ ನಿಜ ವ್ಯಕ್ತಿತ್ವವು ಕೇವಲ ಚೇತನದ ಆವರಣವಾಗಿರುವ ಈ ದೇಹವಲ್ಲ, ಆದರೆ ನಮ್ಮ ನಿಜ ವ್ಯಕ್ತಿತ್ವವು **ದಾಸ**—ಕೃಷ್ಣದಾಸ. ಒಬ್ಬನು ಈ ನಿಜ ವ್ಯಕ್ತಿತ್ವದಲ್ಲಿ ಸನ್ನಿವೇಶಿತನಾದಾಗ ಮತ್ತು ಕೃಷ್ಣನಿಗೆ ಸೇವೆ ಸಲ್ಲಿಸುತ್ತಿರುವಾಗ ಅವನು **ಭಕ್ತ**. **ಹೃಷೀಕೇಣ ಹೃಷಿಕೇಷ ಸೇವನಮ್.** ನಮ್ಮ ಇಂದ್ರಿಯಗಳು ಭೌತಿಕ ಉಪಾಧಿಗಳಿಂದ ಮುಕ್ತವಾದಾಗ ನಾವು ಅವುಗಳನ್ನು ಇಂದ್ರಿಯಗಳ ಸ್ವಾಮಿಯಾದ ಹೃಷಿಕೇಶ ಅಥವಾ ಕೃಷ್ಣನ ಸೇವೆಯಲ್ಲಿ ವಿನಿಯೋಗಿಸುತ್ತೇವೆ.

ನಾವು ಕೃಷ್ಣನನ್ನು ತತ್ಪರವಾಗಿ ಸೇವೆ ಮಾಡಬೇಕೆಂದು ರೂಪ ಗೋಸ್ವಾಮಿ ಹೇಳುತ್ತಾರೆ. ಸಾಮಾನ್ಯವಾಗಿ ನಾವು ಯಾವುದೋ ಭೌತಿಕ ಉದ್ದೇಶ ಅಥವಾ ಲಾಭಕ್ಕಾಗಿ ದೇವರ ಸೇವೆ ಮಾಡಬಯಸುತ್ತೇವೆ. ಆದರೆ ಭೌತಿಕ ಲಾಭಕ್ಕಾಗಿ ದೇವರ ಬಳಿಗೆ ಹೋಗುವವರು ಹೋಗದವನಿಗಿಂತ ಉತ್ತಮ ಎಂಬುದು ನಿಜ. ಆದರೆ ನಾವು ಭೌತಿಕ ಕಾಮನೆಯಿಂದ ಮುಕ್ತರಾಗಿರಬೇಕು. ಕೃಷ್ಣನನ್ನು ಅರಿತುಕೊಳ್ಳುವದು ನಮ್ಮ ಗುರಿಯಾಗಿರಬೇಕು, ಕೃಷ್ಣನು ಅಪರಿಮಿತ ಮತ್ತು ಅವನನ್ನು ಅರಿತುಕೊಳ್ಳುವುದು ಸಾಧ್ಯವಿಲ್ಲ ನಿಜ. ಆದರೆ ನಮ್ಮ ಅರಿವಿಗೆ ನಿಲುಕುವಷ್ಟನ್ನು ನಾವು ಸ್ವೀಕರಿಸಬೇಕು. ಭಗವದ್ಗೀತೆಯು ನಮ್ಮ ಅರಿವಿಗಾಗಿಯೇ ವಿಶೇಷವಾಗಿ ನೀಡಲ್ಪಟ್ಟಿದೆ. ಈ ರೀತಿಯಲ್ಲಿ ಜ್ಞಾನ ಪಡೆಯುವ ಮೂಲಕ ಕೃಷ್ಣನು ಪ್ರೀತನು ಎಂದು ನಾವು ತಿಳಿಯಬೇಕು ಮತ್ತು ಅವನ ಆನಂದಾನುಸಾರ ಅವನ ಪರವಾಗಿ ಸೇವೆ ಸಲ್ಲಿಸಬೇಕು. ಕೃಷ್ಣಪ್ರಜ್ಞೆಯು ಅಪಾರ ಸಾಹಿತ್ಯಯುಕ್ತ ಮಹಾ ವಿಜ್ಞಾನ ಮತ್ತು ನಾವು ಅವುಗಳನ್ನು ಭಕ್ತಿ ಪ್ರಾಪ್ತಿಗಾಗಿ ವಿನಿಯೋಗಿಸಿಕೊಳ್ಳಬೇಕು.

**ಪುರುಷಃ ಸ ಪರಃ**-ಆಧ್ಯಾತ್ಮ ಆಕಾಶದಲ್ಲಿ ಪರಮ ಪ್ರಭು ಪರಮ ಪುರುಷನಾಗಿ ಸನ್ನಿಹಿತನಾಗಿದ್ದಾನೆ. ಅಲ್ಲಿ ಅಸಂಖ್ಯ ಸ್ವಯಂ ಪ್ರಕಾಶಿತ ಗ್ರಹಗಳಿವೆ ಮತ್ತು ಪ್ರತಿಯೊಂದರಲ್ಲಿ ಕೃಷ್ಣನ ವಿಸ್ತರಣೆಯು ನಿವಾಸಿಸುತ್ತಾನೆ. ಅವರು ಚತುರ್ಭುಜವನ್ನು ಮತ್ತು ಅಸಂಖ್ಯಾತ ನಾಮವನ್ನು ಹೊಂದಿರುವರು. ಅವರೆಲ್ಲರೂ ವ್ಯಕ್ತಿಗಳು-ವ್ಯಕ್ತಿತ್ವವಿಲ್ಲ ದಿರುವವರಲ್ಲ. ಈ ಪುರುಷರನ್ನು ಅಥವಾ ವ್ಯಕ್ತಿಗಳನ್ನು ಭಕ್ತಿಯ ಮೂಲಕ ಮಾತ್ರವೇ ಹೊರತು ಹೊರ ಪಂಥದಿಂದಾಗಲೀ, ತಾತ್ವಿಕ ಊಹಾಪೋಹದಿಂದಾಗಲೀ ಅಥವಾ ಮಾನಸಿಕ ಸ್ಥಿತಿಗಳಿಂದಾಗಲಿ ಅಥವಾ ಕಾಯಕ ಕಸರತ್ತುಗಳಿಂದಾಗಲಿ ಅಲ್ಲ, ಆದರೆ ಕಾಮ್ಯ ಕರ್ಮಗಳ ವಿಚಲನೆ ರಹಿತ ಭಕ್ತಿಯಿಂದ ಮಾತ್ರ ತಲುಪಬಹುದು.

ಪರಮ ಪುರುಷನು ಹೇಗಿದ್ದಾನೆ? **ಯಶ್ಯಾಂತಃ ಸ್ಥಾನಿ ಭೂತಾನಿ ಯೇನ ಸರ್ವಂ ಇದಂ ತತಂ**—ಪ್ರತಿಯೊಬ್ಬ ಜೀವಿಯು ಮತ್ತು ಪ್ರತಿಯೊಂದು ವಸ್ತುವು ಅವನಲ್ಲಿದೆ. ಆದರೂ ಅವನು ಅದರ ಹೊರಗೆ ಸರ್ವವ್ಯಾಪ್ತ. ಇದು ಹೇಗೆ ಅವನು ಒಂದು ಸ್ಥಳದಲ್ಲಿ ಸನ್ನಿವೇಶಿತನಾಗಿದ್ದು, ತನ್ನ ಕಿರಣಗಳಿಂದ ಎಲ್ಲಾ ಕಡೆಯಲ್ಲಿ ಇರುವಂತಹ ಸೂರ್ಯನ ಹಾಗೆ. ಭಗವಂತನು ತನ್ನ ಪರಂಧಾಮದಲ್ಲಿ ಸನ್ನಿವೇಶಿತನಾಗಿದ್ದರೂ ಅವನ ಶಕ್ತಿಗಳು ಎಲ್ಲಾ ಕಡೆಯಲ್ಲಿ ವಿತರಿತ. ಸೂರ್ಯ ಮತ್ತು ಸೂರ್ಯ ಪ್ರಕಾಶ ಅಭಿನ್ನವಾಗಿರುವಂತೆ ಅವನು ತನ್ನ ಶಕ್ತಿಗಳಿಂದ ಭಿನ್ನನಲ್ಲ. ಕೃಷ್ಣ ಮತ್ತು ಅವನ

ಶಕ್ತಿಗಳು ಅಭಿನ್ನವಾಗಿರುವುದರಿಂದ ನಾವು ಭಕ್ತಿಯುತ ಸೇವೆಯಲ್ಲಿ ಉತ್ಕೃಷ್ಟವಾಗಿದ್ದರೆ ಪ್ರತಿಯೊಂದು ಕಡೆಯಲ್ಲಿ ಕೃಷ್ಣನನ್ನು ಕಾಣಬಹುದು.

**ಪ್ರೇಮಾಂಜನಚ್ಛುರಿತ ಭಕ್ತಿ ವಿಲೋಚನೇನ**
**ಸಂತಃ ಸದೈವ ಹೃದಯೇಷು ವಿಲೋಕಯಂತಿ**

"ಪ್ರೇಮಾಂಜನದಿಂದ ಲಿಪ್ತ ಕಣ್ಣುಗಳುಳ್ಳ ಶುದ್ಧ ಭಕ್ತರು ಸದಾ ತಮ್ಮ ಹೃದಯಗಳಲ್ಲಿ ಯಾರನ್ನು ಕಾಣುವರೋ ಆ ಮೂಲ ದೇವೋತ್ತಮ ಪುರುಷ ಗೋವಿಂದನನ್ನು ಭಜಿಸುತ್ತೇನೆ" (ಬ್ರಹ್ಮಸಂಹಿತಾ 5.38).

ಭಗವಂತನಿಗೆ ಪ್ರೀತಿಭರಿತರಾದವರು ಸದಾ ತಮ್ಮ ಮುಂದೆ ಅವನನ್ನು ಕಾಣುತ್ತಾರೆ. ನಾವು ನಿನ್ನೆ ರಾತ್ರಿ ದೇವರನ್ನು ಕಂಡೆವು, ಆದರೆ ಅವನು ಇನ್ನೆಂದಿಗೂ ಇಲ್ಲ ಎಂದಲ್ಲ. ಇಲ್ಲ, ಕೃಷ್ಣಪ್ರಾಜ್ಞಿಗೆ ಕೃಷ್ಣನು ಸದಾ ಸನ್ನಿಹಿತನು ಮತ್ತು ಸಂತತವಾಗಿ ಅವನನ್ನು ನೋಡಬಹುದು. ನಾವು ಅವನನ್ನು ಕಾಣುವ ಕಣ್ಣುಗಳನ್ನು ಮಾತ್ರ ಬೆಳೆಸಿಕೊಳ್ಳಬೇಕು.

ಇಂದ್ರಿಯಗಳಿಂದ ಆವೃತವಾದ ಭೌತಿಕ ಬಂಧನದಿಂದಾಗಿ, ಯಾವುದು ಆಧ್ಯಾತ್ಮಿಕ ಎಂಬುದನ್ನು ನಾವು ಅರಿತುಕೊಳ್ಳಲಾಗುವುದಿಲ್ಲ, ಆದರೆ ಈ ಹರೇಕೃಷ್ಣ ಕೀರ್ತನೆಯ ಪ್ರಕ್ರಿಯೆಯಿಂದ ಆ ಅಜ್ಞಾನವು ನಿವಾರಿಸಲ್ಪಡಬಹುದು. ಇದು ಹೇಗೆ ಸಾಧ್ಯ? ಒಬ್ಬ ಮಲಗಿದ ಮನುಷ್ಯನನ್ನು ಧ್ವನಿ ಶಬ್ದದಿಂದ ಎಚ್ಚರಿಸಬಹುದು. ಒಬ್ಬನು ಎಲ್ಲಾ ಆಶಯ ಮತ್ತು ಉದ್ದೇಶಗಳಿಗಾಗಿ ಪ್ರಜ್ಞಾರಹಿತನಾಗಿರಬಹುದು. ಅವನು ನೋಡಲಾರನು, ಅನುಭವಿಸಲಾರನು, ಮೂಸಲಾರನು, ಇತ್ಯಾದಿ— ಆಗಿದ್ದರೂ ಶ್ರವಣೇಂದ್ರಿಯವು ಎಷ್ಟು ಪ್ರಧಾನವೆಂದರೆ ಒಬ್ಬ ಮಲಗಿದವನನ್ನು ಶಬ್ದ ಮಾಡಿಯೇ ಎಚ್ಚರಿಸಬಹುದು. ಅದೇ ಪ್ರಕಾರ ಚೇತನಾತ್ಮವು ಈಗ ಭೌತಿಕ ಸಂಪರ್ಕದ ನಿದ್ರೆಯಿಂದ ಪ್ರಭಾವಿತವಾಗಿದ್ದರೂ **ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ, ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ** ದಿವ್ಯ ಶಬ್ದದಿಂದ ಉಜ್ಜೀವಿಸಬಹುದು. **ಹರೇ ಕೃಷ್ಣ** ಎಂಬುದು ಪರಮ ಪ್ರಭುವಿನ ಮತ್ತು ಅವನ ಶಕ್ತಿಗಳ ಸಂಭೋದನೆ. **ಹರೇ** ಎಂದರೆ ಶಕ್ತಿ ಮತ್ತು ಕೃಷ್ಣ ಪರಮ ಪ್ರಭು. ಆದ್ದರಿಂದ ನಾವು **ಹರೇ ಕೃಷ್ಣ** ಎಂದು ಕೀರ್ತಿಸಿದಾಗ, "ಹೇ ಪ್ರಭು ಶಕ್ತಿಯೇ, ಹೇ ಪ್ರಭುವೇ ದಯವಿಟ್ಟು ನನ್ನನ್ನು ಸ್ವೀಕರಿಸು " ಎಂದು ಹೇಳುತ್ತೇವೆ. ಭಗವಂತನ ಅಂಗೀಕಾರಕ್ಕೆ ನಮಗೆ ಬೇರೆ ಪ್ರಾರ್ಥನೆಯೇ ಇಲ್ಲ. ನಮ್ಮ ದಿನನಿತ್ಯದ ಅನ್ನಕ್ಕಾಗಿ ಪ್ರಾರ್ಥನೆಯ ಪ್ರಶ್ನೆಯೇ ಇಲ್ಲ, ಏಕೆಂದರೆ ಅನ್ನ ಸದಾ ಇದ್ದೇ ಇದೆ. **ಹರೇ ಕೃಷ್ಣ** ಎಂಬುವುದು

ನಮ್ಮನ್ನು ಸ್ವೀಕರಿಸಲು ಅವನನ್ನು ಕೋರುವ ಪರಮ ಪ್ರಭುವಿನ ಸಂಭೋದನೆ ಮಾತ್ರ. ಶ್ರೀ ಚೈತನ್ಯ ಮಹಾಪ್ರಭುಗಳು ಸ್ವಯಂ ಪ್ರಾರ್ಥಿಸಿದರು.

**ಅಯಿ ನಂದ ತನುಜಾ ಕಿಂಕರಂ ಪತಿತಂ ಮಾಂ ವಿಷಮೇ ಭಾವಂಬುದೌ**
**ಕೃಪಯಾ ತವ ಪಾದ ಪಂಕಜ ಸ್ಥಿತಿ ಧೂಳಿ ಸದೃಶಮ್ ವಿಚಿಂತಯ**

"ಏ ಮಹಾರಾಜ ನಂದ ಪುತ್ರನೇ, ನಾನು ನಿನ್ನ ನಿತ್ಯ ದಾಸನು. ಹಾಗಿದ್ದರೂ ಕೂಡ, ಅದೆಂತೋ ಜನನ ಮರಣಗಳ ಸಾಗರದಲ್ಲಿ ಬಿದ್ದಿದ್ದೇನೆ. ಆದ್ದರಿಂದ ದಯವಿಟ್ಟು ಈ ಮರಣ ಸಾಗರದಿಂದ ನನ್ನನ್ನು ಮೇಲೆತ್ತಿ ನಿನ್ನ ಪಾದಕಮಲಗಳಲ್ಲಿ ಒಂದು ಧೂಳಿ ಕಣವಾಗಿ ಸೇರಿಸು" (**ಶಿಕ್ಷಾಷ್ಟಕಮ್**-5).

ಸಾಗರ ಮಧ್ಯದಲ್ಲಿ ಬಿದ್ದ ಮನುಷ್ಯನಿಗೆ ಯಾವನೋ ಒಬ್ಬನು ಬಂದು ಅವನನ್ನು ಮೇಲೆತ್ತುತ್ತಾನೆ ಎಂಬುದು ಒಂದೇ ಆಶೆ. ಒಬ್ಬನು ಬಂದು ಅವನನ್ನು ಕೆಲವು ಅಡಿ ನೀರಿನಿಂದ ಮೇಲೆತ್ತಿದರೆ ಕೂಡಲೇ ಅವನು ಸಮಾಧಾನ ಹೊಂದುತ್ತಾನೆ. ಅದೇ ಪ್ರಕಾರ ನಾವು ಕೃಷ್ಣಪ್ರಜ್ಞಾ ಪ್ರಕ್ರಿಯೆಯಿಂದ ಜನನ ಮರಣಗಳ ಸಾಗರದಿಂದ ಹೇಗೋ ಮೇಲೆತ್ತಲ್ಪಟ್ಟರೆ ಕೂಡಲೇ ಪರಿಹಾರ ಹೊಂದುತ್ತೇವೆ.

ನಾವು ಪರಮ ಪ್ರಭುವಿನ ದಿವ್ಯ ಪ್ರಕೃತಿಯನ್ನು ಎಂದರೆ ಅವನ ನಾಮ, ಯಶ ಮತ್ತು ಚಟುವಟಿಕೆಗಳನ್ನು ಕಾಣಲಾಗದಿದ್ದರೂ ನಾವು ಕೃಷ್ಣಪ್ರಜ್ಞೆಯಲ್ಲಿ ಸ್ಥಾಪಿತವಾದರೆ ಕ್ರಮೇಣ ಭಗವಂತನು ನಮ್ಮ ಮುಂದೆ ಸ್ವಯಂ ಗೋಚರನಾಗುತ್ತಾನೆ. ಭಗವಂತನನ್ನು ನಮ್ಮ ಸ್ವಯತ್ನದಿಂದ ನೋಡಲಾಗುವುದಿಲ್ಲ, ಆದರೆ ಅರ್ಹತೆ ಪಡೆದರೆ ಭಗವಂತನೇ ಸ್ವಯಂ ಗೋಚರನಾಗುತ್ತಾನೆ, ಆಗ ನಾವು ಅವನನ್ನು ಕಾಣುತ್ತೇವೆ. ಯಾರೂ ಕೂಡ ಭಗವಂತನು ತನ್ನ ಮುಂದೆ ಬಂದು ನರ್ತಿಸಬೇಕೆಂದು ಆದೇಶ ಮಾಡಲಾರನು, ಆದರೆ ಕೃಷ್ಣನು ಸ್ವಯಂ ನಮಗೆ ಕಾಣಿಸಿಕೊಳ್ಳುವಷ್ಟು ಪ್ರೀತನಾಗುವಂತೆ ನಾವು ಕಾರ್ಯ ಮಾಡಬೇಕು.

ಕೃಷ್ಣನು ತನ್ನ ಬಗ್ಗೆ ನಮಗೆ **ಭಗವದ್ಗೀತೆ**ಯಲ್ಲಿ ಮಾಹಿತಿ ನೀಡುತ್ತಾನೆ ಮತ್ತು ಅದನ್ನು ಶಂಕಿಸುವ ಪ್ರಶ್ನೆಯೇ ಇಲ್ಲ; ನಾವು ಅದನ್ನು ಅನುಭವಿಸಬೇಕು ಮತ್ತು ಅರಿತುಕೊಳ್ಳಬೇಕು ಅಷ್ಟೆ. **ಭಗವದ್ಗೀತೆ**ಯನ್ನು ಅರಿತುಕೊಳ್ಳಲು **ಭಗವದ್ಗೀತೆ**ಯ ಪ್ರಾಥಮಿಕ ಅರ್ಹತೆಯ ಅವಶ್ಯವಿಲ್ಲ. ಏಕೆಂದರೆ ಅದು ಪರಮ ವೇದಿಕೆಯಿಂದ ಹೇಳಲ್ಪಟ್ಟಿದೆ. ಕೃಷ್ಣನಾಮ ಕೀರ್ತನೆಯ ಸರಳ ಪ್ರಕ್ರಿಯೆಯು ಭಗವಂತನು ಏನು, ಭೌತಿಕ ಮತ್ತು ಆಧ್ಯಾತ್ಮಿಕ ಬ್ರಹ್ಮಾಂಡಗಳು ಏನು, ನಾವು ಏಕೆ ಬದ್ಧರಾಗಿದ್ದೇವೆ ಮತ್ತು ಆ ಬದ್ಧತೆಯಿಂದ ನಾವು ಹೇಗೆ ಪಾರಾಗಬಹುದು ಇತ್ಯಾದಿ

ಪ್ರತಿಯೊಂದನ್ನೂ ಕ್ರಮೇಣ ಪ್ರಕಟಗೊಳಿಸುವುದು. ವಾಸ್ತವಿಕವಾಗಿ ನಂಬಿಕೆ ಮತ್ತು ಗೋಚರತ್ವದ ಪ್ರಕ್ರಿಯೆಯು ನಮಗೆ ಹೊಸದೇನೂ ಅಲ್ಲ. ಆಮೇಲೆ ಪ್ರಕಟವಾಗುವುದು ಎಂಬ ವಿಶ್ವಾಸದಿಂದ ಒಂದಿಲ್ಲೊಂದರಲ್ಲಿ ಪ್ರತಿದಿನ ನಾವು ನಂಬಿಕೆ ಇಡುತ್ತೇವೆ. ನಾವು ಭಾರತಕ್ಕೆ ಹೋಗಲು ಟಿಕೇಟು ತೆಗೆದುಕೊಳ್ಳಬಹುದು ಮತ್ತು ಆ ಟಿಕೇಟಿನ ಆಧಾರದ ಮೇಲೆ ನಾವು ಅಲ್ಲಿಗೆ ಸಾಗಿಸಲ್ಪಡುವೆವು ಎಂಬ ವಿಶ್ವಾಸ ನಮಗೆ ಇದೆ. ನಾವು ಟಿಕೇಟಿಗಾಗಿ ಏಕೆ ಹಣ ಕೊಡಬೇಕು? ನಾವು ಸುಮ್ಮನೆ ಯಾರಿಗೋ ಹಣ ಕೊಡುವುದಿಲ್ಲ. ಕಂಪನಿ ಮತ್ತು ಆ ವಿಮಾನ ಸಂಸ್ಥೆಯು ಅಧಿಕೃತವಾದುದು. ಆದ್ದರಿಂದ ನಮಗೆ ವಿಶ್ವಾಸ ಹುಟ್ಟುತ್ತದೆ. ವಿಶ್ವಾಸವಿಲ್ಲದೆ ನಾವು ನಮ್ಮ ಸಾಮಾನ್ಯ ಜೀವನಕ್ರಮದಲ್ಲಿ ಒಂದು ಹೆಜ್ಜೆ ಕೂಡ ಮುಂದಿಡಲಾರೆವು. ವಿಶ್ವಾಸ ನಮಗೆ ಇರಬೇಕು, ಆದರೆ ಆ ವಿಶ್ವಾಸವು ಅಧಿಕೃತವಾದುದರಲ್ಲಿ ಇರಬೇಕು. ನಾವು ಕುರುಡು ನಂಬಿಕೆ ಹೊಂದಿದ್ದೇವೆ ಎಂದಲ್ಲ, ಆದರೆ ನಾವು ಮನ್ನಿತವಾದುದನ್ನು ಅಂಗೀಕರಿಸುತ್ತೇವೆ ಎಂದು ಅರ್ಥ. ಭಗವದ್ಗೀತೆಯು ಮನ್ನಿತ ಮತ್ತು ಅದು ಭಾರತದಲ್ಲಿ ಸಕಲ ವರ್ಗಗಳ ಜನರಿಂದ ಶಾಸ್ತ್ರವೆಂದು ಅಂಗೀಕೃತ ಮತ್ತು ಭಾರತದ ಹೊರಗಿನ ಮಟ್ಟಿಗೆ ಅನೇಕ ವಿದ್ವಾಂಸರು, ದೇವಶಾಸ್ತ್ರಜ್ಞರು ಮತ್ತು ದಾರ್ಶನಿಕರು ಭಗವದ್ಗೀತೆಯನ್ನು ಮಹಾಪ್ರಮಾಣ ಗ್ರಂಥವೆಂದು ಅಂಗೀಕರಿಸುತ್ತಾರೆ. ಭಗವದ್ಗೀತೆಯು ಪ್ರಮಾಣ ಎಂಬ ವಿಷಯದಲ್ಲಿ ಪ್ರಶ್ನೆಯೇ ಇಲ್ಲ. ಪ್ರೊಫೆಸರ್ ಆಲ್ಬರ್ಟ್ ಐನ್‌ಸ್ಟೇನರಂತಹ ವಿಜ್ಞಾನಿಯು ಕೂಡ ತಪ್ಪದೇ ಭಗವದ್ಗೀತೆ ಓದುತ್ತಿದ್ದರು.

ಭಗವದ್ಗೀತೆಯಿಂದ ನಾವು ಭಗವದ್ಧಾಮವಾದ ಒಂದು ಅಧ್ಯಾತ್ಮ ಬ್ರಹ್ಮಾಂಡವಿದೆ ಎಂಬುದನ್ನು ಅಂಗೀಕರಿಸಬೇಕು. ನಾವು ಮತ್ತೆ ಜನನ, ವೃದ್ಧಾಪ್ಯ, ವ್ಯಾಧಿ ಮತ್ತು ಮರಣಗಳಿಗೆ ಗುರಿಯಾಗುವುದಿಲ್ಲ ಎಂದು ಹೇಳುವ ದೇಶಕ್ಕೆ ಹೇಗೋ ವರ್ಗಾಯಿತರಾದರೆ ನಾವು ಸುಖಪಡುವುದಿಲ್ಲವೇ? ನಾವು ಅಂತಹ ಸ್ಥಳವಿದೆ ಎಂದು ಕೇಳಿದರೆ, ಖಂಡಿತವಾಗಿ ಅಲ್ಲಿಗೆ ಹೋಗಲು ಸಾಧ್ಯವಿದ್ದೆಲ್ಲ ಪ್ರಯತ್ನ ಮಾಡುತ್ತೇವೆ. ಯಾರೂ ಮುದುಕರಾಗಬಯಸುವುದಿಲ್ಲ; ಯಾರೂ ಸಾಯಬಯಸುವುದಿಲ್ಲ, ನಿಜವಾಗಿ ಅಂತಹ ದುಃಖಾನುಭವ ಮುಕ್ತವಾದ ಸ್ಥಳವು ನಮ್ಮ ಹೃದಯಾಂತರಾಳದ ಇಚ್ಛೆಯಾಗಿರುತ್ತದೆ. ನಾವೇಕೆ ಇದನ್ನು ಬಯಸುತ್ತೇವೆ? ಏಕೆಂದರೆ ಅದನ್ನು ಬಯಸುವುದು ನಮ್ಮ ಅಧಿಕಾರ, ವಿಶೇಷಾಧಿಕಾರ. ನಾವು ಶಾಶ್ವತರು, ಆನಂದಮಯರು ಮತ್ತು ಜ್ಞಾನಪೂರ್ಣರು, ಆದರೆ ಈ ಭೌತಿಕ ಬಂಧನದಿಂದ ಆವೃತರಾಗಿರುವುದರಿಂದ ನಮ್ಮನ್ನು ಮರೆತಿದ್ದೇವೆ. ಭಗವದ್ಗೀತೆಯು ನಮ್ಮ ಮೂಲ

ಸ್ಥಾನಮಾನವನ್ನು ಉಜ್ಜೀವಿಸಿಕೊಳ್ಳಲು ಶಕ್ತರಾಗುವ ಪ್ರಯೋಜನವನ್ನು ನಮಗೆ ನೀಡುತ್ತದೆ.

ಆಚೆಗಿನ ಜಗತ್ತು ಶೂನ್ಯ ಎಂದು ಶಂಕರಾನುಯಾಯಿಗಳು ಮತ್ತು ಬೌದ್ಧರು ಹೇಳುತ್ತಾರೆ, ಆದರೆ ಭಗವದ್ಗೀತೆಯು ನಮ್ಮನ್ನು ಹಾಗೆ ನಿರಾಶೆಗೊಳಿಸುವುದಿಲ್ಲ. ಶೂನ್ಯ ದರ್ಶನವು ಕೇವಲ ನಾಸ್ತಿಕರನ್ನು ಮಾತ್ರ ಸೃಷ್ಟಿಸಿದೆ. ನಾವು ಆಧ್ಯಾತ್ಮ ಚೇತನರು ಮತ್ತು ನಮಗೆ ಭೋಗ ಬೇಕು, ಆದರೆ ನಮ್ಮ ಭವಿಷ್ಯವು ಶೂನ್ಯ ಆದೊಡನೆಯೇ, ನಾವು ಈ ಭೌತಿಕ ಜೀವನವನ್ನು ಭೋಗಿಸುವ ಪ್ರವೃತ್ತಿ ಹೊಂದುತ್ತೇವೆ. ಈ ರೀತಿಯಲ್ಲಿ ವ್ಯಕ್ತಿಶೂನ್ಯವಾದಿಗಳು ಭೌತಿಕ ಜೀವನವನ್ನು ಸಾಧ್ಯವಿದ್ದಷ್ಟು ಭೋಗಿಸಲು ಯತ್ನಿಸುತ್ತಾ ಊಹಾಪೋಹದಲ್ಲಿ ಸುಖಿಸಬಹುದು, ಆದರೆ ಅದರಿಂದ ಯಾವ ಆಧ್ಯಾತ್ಮಿಕ ಪ್ರಯೋಜನವೂ ಇಲ್ಲ.

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ**
**ಸಮಃ ಸರ್ವೇಷು ಭೂತೇಷು ಮದ್‌ಭಕ್ತಿಂ ಲಭತೇ ಪರಾಮ್**

"ಹೀಗೆ ದಿವ್ಯವಾಗಿ ಸನ್ನಿವೇಶಿತನಾದವನು ತಕ್ಷಣ ಪರಮ ಬ್ರಹ್ಮನ್‌ನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ ಅವನು ಎಂದೂ ಶೋಕಿಸುವುದಿಲ್ಲ ಅಥವಾ ಏನನ್ನೂ ಹೊಂದಲಿಚ್ಛಿಸುವುದಿಲ್ಲ. ಅವನು ಪ್ರತಿಯೊಬ್ಬ ಜೀವಿಯ ಬಗ್ಗೆ ಸಮಭಾವ ಉಳ್ಳವನು. ಆ ಸ್ಥಿತಿಯಲ್ಲಿ ಅವನು ನನ್ನ ಶುದ್ಧ ಭಕ್ತಿಯುತ ಸೇವೆಯನ್ನು ಹೊಂದುತ್ತಾನೆ" (ಭ. ಗೀ. 18.54).

ಭಕ್ತಿಯುತ ಜೀವನದಲ್ಲಿ ಪ್ರಗತಿ ಹೊಂದಿದವನು ಮತ್ತು ಕೃಷ್ಣನ ಸೇವೆಯನ್ನು ಸವಿಯುವವನು ತಾನಾಗಿಯೇ ಭೌತಿಕ ಭೋಗದಿಂದ ನಿವೃತ್ತನಾಗುತ್ತಾನೆ. ಭಕ್ತಿಯಲ್ಲಿ ತಲ್ಲೀನನಾದವನ ಸಂಕೇತವೆಂದರೆ ಅವನು ಕೃಷ್ಣನಿಂದ ಪೂರ್ಣ ತೃಪ್ತನು.

# ಕೃಷ್ಣ ಸಂಗ

ಒಬ್ಬನು ಉತ್ತಮವಾದುದು ಏನನ್ನಾದರೂ ಪಡೆದರೆ ಅವನು ಸ್ವಾಭಾವಿಕವಾಗಿ ಅದಕ್ಕಿಂತ ಅಧಮವಾದ ವಸ್ತುಗಳನ್ನೆಲ್ಲಾ ತ್ಯಜಿಸುತ್ತಾನೆ. ನಮಗೆ ಭೋಗ ಬೇಕು, ಆದರೆ ವ್ಯಕ್ತಿಶೂನ್ಯವಾದವು ಎಂತಹ ವಾತಾವರಣ ಸೃಷ್ಟಿಸಿದೆ ಎಂದರೆ ನಾವು ಭೌತಿಕ ಭೋಗಕ್ಕೆ ಒಗ್ಗಿಹೋಗಿದ್ದೇವೆ. (ಪುರುಷಃ ಸ ಪರಃ) ಯಾರನ್ನು ನಾವು ಸಾಕ್ಷಾತ್ತಾಗಿ ಕಾಣಬಹುದೋ ಆ ಪರಮ ಪುರುಷನ ಸಂಬಂಧದಲ್ಲಿ ಭೋಗವಿರಬೇಕು. ಅಧ್ಯಾತ್ಮ ಆಕಾಶದಲ್ಲಿ ನಾವು ದೇವರೊಡನೆ ಸ್ವಯಂ ಮಾತನಾಡಲು, ಕ್ರೀಡಿಸಲು ಅವನೊಡನೆ ಭುಂಜಿಸಲು ಇತ್ಯಾದಿಗಳಿಗೆ ಶಕ್ತರು. ಇದೆಲ್ಲವನ್ನು ಭಕ್ತ್ಯಾ ದಿವ್ಯ ಪ್ರೀತಿಯುತ ಸೇವೆಯಿಂದ ಹೊಂದಬಹುದು. ಆದರೆ ಈ ಸೇವೆಯು ಕಲಬೆರಕೆರಹಿತವಾಗಿರಬೇಕು. ಎಂದರೆ ನಾವು ಭೌತಿಕ ಪ್ರತಿಫಲ ನಿರೀಕ್ಷಿಸದೆ ದೇವರನ್ನು ಪ್ರೀತಿಸಬೇಕು. ಅವನೊಡನೆ ಐಕ್ಯವಾಗಲು ದೇವರನ್ನು ಪ್ರೀತಿಸುವುದು ಕೂಡ ಒಂದು ಬಗೆಯ ಕಲಬೆರಕೆ.

ಆಧ್ಯಾತ್ಮಿಕ ಆಕಾಶ ಮತ್ತು ಭೌತಿಕ ಆಕಾಶದ ನಡುವೆ ಇರುವ ಪ್ರಧಾನ ವ್ಯತ್ಯಾಸಗಳಲ್ಲಿ ಒಂದೆಂದರೆ ಅಧ್ಯಾತ್ಮ ಆಕಾಶದಲ್ಲಿ ಆಧ್ಯಾತ್ಮಿಕ ಗ್ರಹಗಳ ಮುಖ್ಯನಿಗೆ ಅಥವಾ ನಾಯಕನಿಗೆ ಯಾವ ಸ್ಪರ್ಧೆ ಇಲ್ಲ. ಎಲ್ಲಾ ಸಂದರ್ಭಗಳಲ್ಲಿ, ಅಧ್ಯಾತ್ಮ ಲೋಕಗಳಲ್ಲಿ ಅಭಿಮಾನಿ ಪುರುಷನು ಶ್ರೀಕೃಷ್ಣನ ಸಮಗ್ರ ವಿಸ್ತರಣೆ. ಪರಮ ಪ್ರಭು ಮತ್ತು ಅವನ ಬಹುಮುಖ ಅಭಿವ್ಯಕ್ತಿಗಳು ಎಲ್ಲಾ ವೈಕುಂಠ ಲೋಕಗಳಲ್ಲಿ ಅಧಿಷ್ಠಿತ. ಉದಾಹರಣೆಗೆ ಭೂಮಿಯ ಮೇಲೆ ರಾಷ್ಟ್ರಪತಿ ಅಥವಾ ಪ್ರಧಾನಿಯ ಸ್ಥಾನಕ್ಕೆ ಪೈಪೋಟಿ ಇದೆ, ಆದರೆ ಆಧ್ಯಾತ್ಮಿಕ ಆಕಾಶದಲ್ಲಿ ಪರಮ ದೇವೋತ್ತಮ ಪುರುಷನು ಪರಮ ಪುರುಷನೆಂದು ಪ್ರತಿಯೊಬ್ಬನು ಒಪ್ಪಿಕೊಳ್ಳುತ್ತಾನೆ. ಅವನನ್ನು ಒಪ್ಪಿಕೊಳ್ಳದವರು ಮತ್ತು ಅವನನ್ನು ವಿರೋಧಿಸಲೆತ್ನಿಸುವವರು ಕಾರಾಗೃಹದಂತಿರುವ ಭೌತಿಕ ಬ್ರಹ್ಮಾಂಡದಲ್ಲಿ ಇರಿಸಲ್ಪಡುತ್ತಾರೆ. ಒಂದು ನಗರದಲ್ಲಿ ಕಾರಾಗೃಹದಂತಿರುವ ಮತ್ತು ಕಾರಾಗೃಹವು ಅದೇ ನಗರದ ಒಂದು ಕ್ಷುದ್ರ ಭಾಗವಾಗಿರುವಂತೆ, ಭೌತಿಕ ಬ್ರಹ್ಮಾಂಡವು ಬದ್ಧಾತ್ಮರಿಗಾಗಿ ಒಂದು ಕಾರಾಗೃಹ. ಅದು ಅಧ್ಯಾತ್ಮ ಆಕಾಶದ ಒಂದು ಭಾಗ, ಆದರೆ ಕಾರಾಗೃಹವು ನಗರದ ಹೊರಗೆ ಇಲ್ಲದಿರುವಂತೆ ಆಧ್ಯಾತ್ಮಿಕ ಆಕಾಶದ ಹೊರಗೆ ಇಲ್ಲ.

ಆಧ್ಯಾತ್ಮಿಕ ಆಕಾಶದಲ್ಲಿಯ ವೈಕುಂಠಲೋಕ ನಿವಾಸಿಗಳು ಎಲ್ಲರೂ ಮುಕ್ತಾತ್ಮರು. ಅವರ ದೇಹ ಲಕ್ಷಣಗಳು ಭಗವದ್ ದೇಹ ಲಕ್ಷಣಗಳಂತೆಯೇ ಎಂದು ಶ್ರೀಮದ್ಭಾಗವತದಿಂದ ನಮಗೆ ತಿಳಿಯುತ್ತದೆ, ಈ ಕೆಲವು ಲೋಕಗಳಲ್ಲಿ ಭಗವಂತನು ದ್ವಿಭುಜನಾಗಿ ವ್ಯಕ್ತನು ಮತ್ತು ಇತರ ಲೋಕಗಳಲ್ಲಿ ಅವನು ಚತುರ್ಭುಜನು. ಈ ಲೋಕ ನಿವಾಸಿಗಳು ಪರಮ ಪ್ರಭುವಿನಂತೆ, ಕೂಡ ದ್ವಿಭುಜ ಮತ್ತು ಚತುರ್ಭುಜಗಳನ್ನು ವ್ಯಕ್ತಗೊಳಿಸುತ್ತಾರೆ ಮತ್ತು ಒಬ್ಬನು ಅವರು ಮತ್ತು ಪರಮ ಪುರುಷನ ನಡುವೆ ವ್ಯತ್ಯಾಸವನ್ನು ಕಾಣಲಾರರು ಎಂದು ಹೇಳಲಾಗಿದೆ. ಅಧ್ಯಾತ್ಮ ಲೋಕದಲ್ಲಿ ಐದು ಬಗೆಯ ಮೋಕ್ಷಗಳಿವೆ. ಸಾಯುಜ್ಯ ಮುಕ್ತಿಯಲ್ಲಿ ಒಬ್ಬನು ಬ್ರಹ್ಮನ್ ಎಂದು ಕರೆಯುವ ಪರಮ ಪ್ರಭುವಿನ ವ್ಯಕ್ತಿಶೂನ್ಯ ಅಸ್ತಿತ್ವದಲ್ಲಿ ಐಕ್ಯನಾಗುತ್ತಾನೆ. ಸಾರೂಪ್ಯ ಮುಕ್ತಿಯೆಂಬ ಮತ್ತೊಂದು ರೂಪದ ಮೋಕ್ಷದಲ್ಲಿ ಒಬ್ಬನು ದೇವರಂತಹ ಲಕ್ಷಣಗಳನ್ನೇ ಪಡೆಯುತ್ತಾನೆ. ಮತ್ತೊಂದು ಸಾಲೋಕ್ಯ ಮುಕ್ತಿ, ಅದರಲ್ಲಿ ಒಬ್ಬನು ಭಗವಂತನಿರುವ ಲೋಕದಲ್ಲಿಯೇ ಇರಬಹುದು. ಸಾರ್ಷ್ಟಿ ಮುಕ್ತಿಯಲ್ಲಿ ಒಬ್ಬನು ಪರಮ ಪ್ರಭುವಿನಂತಹ ಐಶ್ವರ್ಯಗಳನ್ನು ಹೊಂದಬಹುದು. ಮತ್ತೊಂದು ಬಗೆಯ ಮುಕ್ತಿಯು, ಅರ್ಜುನನಂತೆ ಸದಾ ಕೃಷ್ಣ ಸಖನಾಗಿ ಅವನೊಡನೆ ಇದ್ದಂತೆ ಸದಾ ಭಗವಂತನ ಸಂಗಾತಿಯಾಗಿ ಇರಲು ಶಕ್ತಗೊಳಿಸುತ್ತದೆ. ಒಬ್ಬನು ಈ ಐದು ಬಗೆಯ ಮೋಕ್ಷಗಳಲ್ಲಿ ಯಾವುದನ್ನಾದರೂ ಹೊಂದಬಹುದು. ಆದರೆ ವ್ಯಕ್ತಿ ಶೂನ್ಯ ಅಂಶದೊಡನೆ ಲೀನವಾಗುವ ಸಾಯುಜ್ಯ ಮುಕ್ತಿಯು ವೈಷ್ಣವ ಭಕ್ತರಿಂದ ಅಂಗೀಕೃತವಲ್ಲ. ವೈಷ್ಣವನು ಭಗವಂತನು ಇರುವಂತೆ ಅವನನ್ನು ಆರಾಧಿಸಬಯಸುತ್ತಾನೆ ಮತ್ತು ಅವನ ಸೇವೆ ಮಾಡಲು ತನ್ನ ಪ್ರತ್ಯೇಕ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬಯಸುತ್ತಾನೆ, ಆದರೆ ಮಾಯಾವಾದಿ ವ್ಯಕ್ತಿಶೂನ್ಯ ತಾತ್ತ್ವಿಕನು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಪರಮ ಪುರುಷನ ಅಸ್ತಿತ್ವದಲ್ಲಿ ಲೀನನಾಗಬಯಸುತ್ತಾನೆ. ಈ ಐಕ್ಯವು ಭಗವದ್ಗೀತೆಯಲ್ಲಿ ಕೃಷ್ಣನಿಂದ ಅಥವಾ ವೈಷ್ಣವ ದಾರ್ಶನಿಕರ ಗುರುಪರಂಪರೆಯಿಂದ ಹೇಳಲ್ಪಟ್ಟಿಲ್ಲ. ಶ್ರೀ ಚೈತನ್ಯ ಮಹಾಪ್ರಭುಗಳು ಈ ವಿಷಯ ಕುರಿತು ತಮ್ಮ ಶಿಕ್ಷಾಷ್ಟಕದಲ್ಲಿ ಹೀಗೆ ಬರೆಯುತ್ತಾರೆ.

ನ ಧನಂ ನ ಜನಂ ನ ಸುಂದರೀಂ ಕವಿತಾಂ ವಾ ಜಗದೀಶ ಕಾಮಯೇ
ಮಮ ಜನ್ಮನಿ ಜನ್ಮನೀಶ್ವರೇ ಭವತಾದ್ ಭಕ್ತಿರ್ಅಹೈತುಕೀ ತ್ವಯಿ

"ಹೇ ಪ್ರಭುವೇ; ನನಗೆ ಧನಸಂಚಯದ ಇಚ್ಛೆಯಿಲ್ಲ ಅಥವಾ ಸುಂದರ ಸ್ತ್ರೀಯರ ಭೋಗದ ಯಾವ ಇಚ್ಛೆ ಇಲ್ಲ ಅಥವಾ ಅನೇಕ ಜನ ಶಿಷ್ಯರ ಇಚ್ಛೆಯೂ ಇಲ್ಲ. ನನಗೆ

ಬೇಕಾದುದು ಒಂದೇ ಎಂದರೆ ಜನ್ಮಜನ್ಮಗಳಲ್ಲಿ ನಿನ್ನ ಅವ್ಯಾಜ ಭಕ್ತಿಯುತ ಸೇವೆ ಮಾತ್ರ" (ಶಿಕ್ಷಾಷ್ಟಕಮ್ 4).

ಇಲ್ಲಿ ಶ್ರೀ ಚೈತನ್ಯ ಮಹಾಪ್ರಭುಗಳು "ಜನ್ಮ ಜನ್ಮಗಳನ್ನು" ಉಲ್ಲೇಖಿಸುತ್ತಾರೆ. ಜನ್ಮದ ತರುವಾಯ ಜನ್ಮವಾದಾಗ ಮೋಕ್ಷವಿಲ್ಲ. ಮೋಕ್ಷದಲ್ಲಿ ಒಬ್ಬನು ಆಧ್ಯಾತ್ಮ ಲೋಕಗಳನ್ನು ಹೊಂದುತ್ತಾನೆ ಅಥವಾ ಪರಮ ಪುರುಷನ ಅಸ್ತಿತ್ವದಲ್ಲಿ ಐಕ್ಯನಾಗುತ್ತಾನೆ. ಉಭಯ ಪ್ರಸಂಗಗಳಲ್ಲಿ ಭೌತಿಕ ಜಗತ್ತಿನಲ್ಲಿ ಮತ್ತೆ ಹುಟ್ಟುವ ಪ್ರಶ್ನೆಯಿಲ್ಲ. ಆದರೆ ಚೈತನ್ಯ ಮಹಾಪ್ರಭುಗಳು ಮುಕ್ತರಾಗಲಿ ಅಥವಾ ಆಗದೇ ಇರಲಿ, ಅದಕ್ಕೆ ಗಮನ ನೀಡುವುದಿಲ್ಲ. ಪರಮ ಪ್ರಭುವಿನ ಸೇವೆ ಮಾಡಲು ಕೃಷ್ಣಪ್ರಜ್ಞೆಯಲ್ಲಿ ನಿರತವಾಗಿರುವುದು ಮಾತ್ರ ಅವರ ಗುರಿ. ಭಕ್ತನು ತಾನು ಎಲ್ಲಿದ್ದಾನೆ ಎಂಬುದನ್ನು ಗಮನಿಸುವುದಿಲ್ಲ. ಅಥವಾ ಅವನು ಪಶುವರ್ಗದಲ್ಲಿ, ಮಾನವ ಕುಲದಲ್ಲಿ ಅಥವಾ ದೇವತಾ ಸಮೂಹದಲ್ಲಿ ಅಥವಾ ಎಲ್ಲಿಯಾಗಲಿ ಹುಟ್ಟುವುದಕ್ಕೆ ಗಮನ ನೀಡುವುದಿಲ್ಲ—ಆದರೆ ಅವನು ಭಗವಂತನನ್ನು ಮರೆಯದಂತೆ ಮತ್ತು ಸದಾ ಅವನ ದಿವ್ಯ ಸೇವೆಯಲ್ಲಿ ನಿರತನಾಗಿರುವಂತೆ ಮಾತ್ರ ಮಾಡಬೇಕೆಂದು ಭಗವಂತನನ್ನು ಪ್ರಾರ್ಥಿಸುತ್ತಾನೆ. ಇವು ಶುದ್ಧ ಭಕ್ತಿಯ ಸಂಕೇತಗಳು. ಭಕ್ತನು ಎಲ್ಲಿಯೇ ಇರಲಿ, ಭೌತಿಕ ದೇಹದಲ್ಲಿ ಇರುವಾಗಲೂ ಕೂಡ ಆಧ್ಯಾತ್ಮ ಸಾಮ್ರಾಜ್ಯದಲ್ಲಿ ಇರುತ್ತಾನೆ ನಿಜ. ಆದರೆ ಅವನು ತನ್ನ ವ್ಯಕ್ತಿಗತ ಉನ್ನತಿಗಾಗಿ ಅಥವಾ ಸೌಖ್ಯಕ್ಕಾಗಿ ದೇವರಿಂದ ಏನನ್ನೂ ಕೇಳುವುದಿಲ್ಲ.

ತನ್ನ ಭಕ್ತನಾದವನು ಸುಲಭವಾಗಿ ತನ್ನನ್ನು ತಲುಪಬಹುದು ಎಂದು ಶ್ರೀಕೃಷ್ಣನು ಸೂಚಿಸುತ್ತಿದ್ದರೂ, ಯೋಗದ ಇತರ ವಿಧಾನಗಳನ್ನು ಆಚರಿಸುವ ಯೋಗಿಗಳಿಗೆ ಕಿಂಚಿತ್ ಅಪಾಯ ಇದ್ದೇ ಇದೆ. ಅವರಿಗಾಗಿ ತಕ್ಕ ಕಾಲದಲ್ಲಿ ಜಡ ದೇಹವನ್ನು ತ್ಯಜಿಸಲು ಅವನು ಭಗವದ್ಗೀತೆಯಲ್ಲಿ ನಿರ್ದೇಶಿಸಿದ್ದಾನೆ.

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥**

"ಹೇ ಭರತ ಶ್ರೇಷ್ಠನೇ, ಯಾವ ವಿವಿಧ ಕಾಲಗಳಲ್ಲಿ ಈ ಜಗತ್ತಿನಿಂದ ಗತಿಸುವ ಯೋಗಿಯು, ಮರಳಿ ಬರುವನು ಅಥವಾ ಬಾರದಿರುವನು ಎಂಬುದನ್ನು ನಾನು ನಿನಗೆ ವಿವರಿಸುವೆನು" (ಭ. ಗೀ. 8.23).

ಒಬ್ಬನು ನಿರ್ದಿಷ್ಟ ಕಾಲದಲ್ಲಿ ದೇಹ ತ್ಯಜಿಸಲು ಶಕ್ತನಾದರೆ, ಅವನು ಮತ್ತೆ ಭೌತಿಕ ಜಗತ್ತಿಗೆ ಎಂದಿಗೂ ಮರಳದಂತೆ ಮುಕ್ತನಾಗಬಹುದು ಎಂದು ಶ್ರೀಕೃಷ್ಣನು

ಇಲ್ಲಿ ಸೂಚಿಸುತ್ತಾನೆ. ಇದಕ್ಕೆ ಬದಲಾಗಿ, ಒಬ್ಬನು ಮತ್ತೊಂದು ಕಾಲದಲ್ಲಿ ಮೃತನಾದರೆ, ಅವನು ಮರಳಬೇಕಾಗುತ್ತದೆ ಎಂದು ಸೂಚಿಸುತ್ತಾನೆ. ಆದರಲ್ಲಿ ಈ ಆಕಸ್ಮಿಕ ಅಂಶವಿದೆ, ಆದರೆ ಸದಾ ಕೃಷ್ಣಪ್ರಜ್ಞೆಯಲ್ಲಿ ಇರುವ ಭಕ್ತನಿಗೆ ಇಂತಹ ಆಕಸ್ಮಿಕದ ಪ್ರಶ್ನೆಯೇ ಇಲ್ಲ. ಏಕೆಂದರೆ ಅವನು ತನ್ನ ಭಗವದ್ಭಕ್ತಿಯ ನಿಮಿತ್ತ ಕೃಷ್ಣನ ಧಾಮದಲ್ಲಿ ಪ್ರವೇಶಿಸುವ ಭರವಸೆ ಹೊಂದಿರುತ್ತಾನೆ.

**ಅಗ್ನಿರ್ಜ್ಯೋತಿರಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥**

"ಪರಬ್ರಹ್ಮನನ್ನು ತಿಳಿದವರು, ಅಗ್ನಿದೇವತೆಯ ಪ್ರಭಾವದಲ್ಲಿ, ಜ್ಯೋತಿ ಪ್ರಕಾಶದಲ್ಲಿ, ಹಗಲಿನ ಶುಭಘಳಿಗೆಯಲ್ಲಿ, ಶುಕ್ಲಪಕ್ಷದಲ್ಲಿ ಅಥವಾ ಸೂರ್ಯನು ಉತ್ತರದಲ್ಲಿ ಪ್ರಯಾಣ ಮಾಡುವ ಆರು ತಿಂಗಳುಗಳಲ್ಲಿ ಜಗತ್ತಿನಿಂದ ಗತಿಸುವುದರಿಂದ ಆ ಪರಮ ಪುರುಷನನ್ನು ಸೇರುವರು" (ಭ. ಗೀ. 8-24).

ಸೂರ್ಯನು ಆರು ತಿಂಗಳುಗಳನ್ನು ಭೂಮಧ್ಯ ರೇಖೆಯ ಉತ್ತರದಲ್ಲಿ ಕಳೆಯುತ್ತಾನೆ ಮತ್ತು ಆರು ತಿಂಗಳುಗಳನ್ನು ದಕ್ಷಿಣದ ಕಡೆಯಲ್ಲಿ ಕಳೆಯುತ್ತಾನೆ. ಗ್ರಹಗಳು ಚಲಿಸುತ್ತಿರುವಂತೆ, ಸೂರ್ಯನೂ ಚಲಿಸುತ್ತಾನೆ ಎಂದು ನಾವು ಶ್ರೀಮದ್ಭಾಗವತದಿಂದ ತಿಳಿಯುತ್ತೇವೆ. ಒಬ್ಬನು ಸೂರ್ಯನು ಉತ್ತರ ಗೋಲಾರ್ಧದಲ್ಲಿ ಇರುವಾಗ ಮರಣ ಹೊಂದಿದರೆ ಅವನು ಮೋಕ್ಷ ಹೊಂದುತ್ತಾನೆ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾನ್ದ್ರ ಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥**

**ಶುಕ್ಲ ಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ**
**ಏಕಯಾ ಯಾತ್ಯನಾವೃತ್ತಿಮನ್ಯಯಾ ವರ್ತತೇ ಪುನಃ**

"ಹೊಗೆಯಲ್ಲಿ, ರಾತ್ರಿಯಲ್ಲಿ, ಕೃಷ್ಣಪಕ್ಷದಲ್ಲಿ ಅಥವಾ ಸೂರ್ಯನು ದಕ್ಷಿಣ ದಿಕ್ಕಿನಲ್ಲಿ ಸಾಗುವಾಗ, ಈ ಜಗತ್ತಿನಿಂದ ಗತಿಸುವ ಯೋಗಿಯು ಚಂದ್ರ ಲೋಕವನ್ನು ತಲುಪುತ್ತಾನೆ, ಆದರೆ ಮತ್ತೆ ಮರಳಿ ಬರುತ್ತಾನೆ."

ವೇದ ಅಭಿಪ್ರಾಯಕ್ಕೆ ಅನುಸಾರವಾಗಿ, ಈ ಜಗತ್ತಿನಿಂದ ಗತಿಸುವ ಎರಡು ವಿಧಗಳು ಇವೆ-ಒಂದು ಶುಕ್ಲಪಕ್ಷದಲ್ಲಿ, ಮತ್ತೊಂದು ಕೃಷ್ಣಪಕ್ಷದಲ್ಲಿ. ಶುಕ್ಲಪಕ್ಷದಲ್ಲಿ ಗತಿಸುವವನು ಮರಳಿ ಬರುವುದಿಲ್ಲ; ಆದರೆ ಕೃಷ್ಣಪಕ್ಷದಲ್ಲಿ ಗತಿಸುವವನು ಮರಳಿ ಬರುತ್ತಾನೆ" (ಭ. ಗೀ. 8.25-26).

ಇದೆಲ್ಲವು ಆಕಸ್ಮಿಕವಾದುದು. ನಾವು ಯಾವಾಗ ಸಾಯುತ್ತೇವೆ ಎಂಬುದು ನಮಗೆ ಗೊತ್ತಿಲ್ಲ, ನಾವು ಆಕಸ್ಮಿಕವಾಗಿ ಯಾವ ಕಾಲದಲ್ಲಿಯೇ ಸಾಯುಬಹುದು. ಆದರೆ ಕೃಷ್ಣಪ್ರಜ್ಞಾ ಪ್ರತಿಷ್ಠಿತ ಭಕ್ತಿ ಯೋಗಿಗೆ ಆಕಸ್ಮಿಕದ ಪ್ರಶ್ನೆಯೇ ಇಲ್ಲ. ಅವನು ಸದಾ ಸುನಿಶ್ಚಿತನು.

ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥

"ಹೇ ಅರ್ಜುನ, ಭಕ್ತರು ಈ ಎರಡು ಮಾರ್ಗಗಳನ್ನು ತಿಳಿದಿದ್ದರೂ ಕೂಡ, ಅವರು ಎಂದಿಗೂ ದಿಗ್ಭ್ರಮಿತರಲ್ಲ. ಆದ್ದರಿಂದ ಭಕ್ತಿಯಲ್ಲಿ ಯಾವಾಗಲು ಸ್ಥಿತನಾಗಿರು" (ಭ. ಗೀ. 8.27).

ಮರಣ ಕಾಲದಲ್ಲಿ ಒಬ್ಬನು ಕೃಷ್ಣನನ್ನು ಕುರಿತು ಚಿಂತನ ಮಾಡಬಹುದಾದರೆ, ಅವನು ತಕ್ಷಣ ಕೃಷ್ಣನ ಧಾಮಕ್ಕೆ ವರ್ಗಾಯಿತನಾಗಿರುತ್ತಾನೆ ಎಂದು ಈಗಾಗಲೇ ನಮಗೆ ಖಚಿತವಾಗಿ ತಿಳಿದಿದೆ.

ಅನ್ತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥

ಅಭ್ಯಾಸ ಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ॥

'ಮತ್ತು ಯಾವನು ತನ್ನ ಜೀವನದ ಕೊನೆಯಲ್ಲಿ ನನ್ನನ್ನೇ ಸ್ಮರಿಸುತ್ತಾ ದೇಹ ತ್ಯಜಿಸುವನೋ, ಅವನು ಕೂಡಲೇ ತನ್ನ ಭಾವವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

ನನ್ನನ್ನು ಪರಮ ದೇವೋತ್ತಮ ಪುರುಷನೆಂದು ಧ್ಯಾನಿಸುವವನು, ಪಥ ವಿಚಲಿತನಾಗದೆ ಇದ್ದು, ಅವನ ಮನಸ್ಸು ಸತತವಾಗಿ ನನ್ನ ಸ್ಮರಣೆಯಲ್ಲಿ ನಿರತವಾಗಿದ್ದು, ಹೇ ಪಾರ್ಥನೇ, ಅವನು ಖಂಡಿತ ನನ್ನನ್ನು ಸೇರುತ್ತಾನೆ" (ಭ.ಗೀ. 8.5, 8.8).

ಕೃಷ್ಣನ ಅಂತಹ ಧ್ಯಾನವು ಬಹು ಕಷ್ಟಕರವೆನಿಸಬಹುದು ಆದರೆ ಅದು ಹಾಗಿಲ್ಲ. ಒಬ್ಬನು ಹರೇಕೃಷ್ಣ ಹರೇಕೃಷ್ಣ, ಕೃಷ್ಣ ಕೃಷ್ಣ, ಹರೇ ಹರೇ, ಹರೇರಾಮ, ಹರೇರಾಮ, ರಾಮ ರಾಮ, ಹರೇ ಹರೇ —ಮಹಾಮಂತ್ರ ಜಪಿಸುತ್ತ ಕೃಷ್ಣಪ್ರಜ್ಞೆಯನ್ನು ಅಭ್ಯಾಸಿಸಿದರೆ, ಅವನು ಬೇಗನೆ ನೆರವು ಪಡೆಯುತ್ತಾನೆ. ಕೃಷ್ಣ ಮತ್ತು ಅವನ ನಾಮವು ಅಭಿನ್ನವಾದುವು ಮತ್ತು ಕೃಷ್ಣ ಮತ್ತು ಅವನ ದಿವ್ಯ ಧಾಮಗಳು ಕೂಡ

ಅಭಿನ್ನವಾದುವು. ಶಬ್ದೋಚ್ಚಾರದಿಂದ ನಾವು ಕೃಷ್ಣನನ್ನು ನಮ್ಮ ಜೊತೆಗೂಡಿಸಬಹುದು. ಉದಾಹರಣೆಗೆ, ನಾವು ದಾರಿಯಲ್ಲಿ ಹರೇಕೃಷ್ಣ ಎಂದು ಕೀರ್ತಿಸಿದರೆ ನಾವು ಮೇಲೆ ಚಂದ್ರನನ್ನು ಕಂಡಾಗ ಅವನು ನಮ್ಮೊಡನೆ ಸಾಗುತ್ತಿದ್ದಾನೆ ಎಂಬುದನ್ನು ಕಾಣುವಂತೆ ಕೃಷ್ಣನು ನಮ್ಮೊಡನೆ ಸಾಗುತ್ತಿದ್ದಾನೆ ಎಂದು ಕಾಣುತ್ತೇವೆ. ಕೃಷ್ಣನ ಅಪರಾ ಶಕ್ತಿಯು ನಮ್ಮೊಡನೆ ಸಾಗುತ್ತಿರುವಂತೆ ತೋರಬಹುದಾಗಿದ್ದರೆ ನಾವು ಅವನ ನಾಮ ಮತ್ತು ಕೀರ್ತನೆ ಮಾಡುವಾಗ ಸ್ವಯಂ ಕೃಷ್ಣನು ನಮ್ಮೊಡನಿರುವುದು ಸಾಧ್ಯವಿಲ್ಲವೆ? ಅವನು ನಮ್ಮೊಡನೆ ಇರುತ್ತಾನೆ. ಆದರೆ ನಾವು ಅವನೊಡನೆ ಇರಲು ಅರ್ಹರಾಗಬೇಕು. ಆದರೆ ನಾವು ಸದಾ ಕೃಷ್ಣ ಚಿಂತನದಲ್ಲಿ ಮಗ್ನರಾಗಿದ್ದರೆ ಕೃಷ್ಣನು ಸದಾ ನಮ್ಮೊಂದಿಗಿರುವನು ಎಂದು ಖಂಡಿತ ತಿಳಿದುಕೊಳ್ಳಬೇಕು. ಶ್ರೀ ಚೈತನ್ಯ ಮಹಾಪ್ರಭುಗಳು ಪ್ರಾರ್ಥಿಸುತ್ತಾರೆ—

**ನಾಮ್ನಾಮಕಾರಿ ಬಹುಧಾ ನಿಜ ಸರ್ವ ಶಕ್ತಿಸ್**
**ತತ್ರಾರ್ಪಿತಾ ನಿಯಮಿತಃ ಸ್ಮರಣೇ ನ ಕಾಲಃ**
**ಏತಾದೃಶೀ ತವ ಕೃಪಾ ಭಗವನ್ ಮಾಮಾಪಿ**
**ದುರ್ದೈವ ಮೀದೃಶಮಿಹಾ ಜನಿನಾನುರಾಗಃ**

"ಹೇ ಮಹಾಪ್ರಭೋ! ನಿನ್ನ ಪುಣ್ಯ ನಾಮವೇ ಜೀವಿಗಳಿಗೆ ಸಕಲ ವರಗಳನ್ನು ನೀಡಬಲ್ಲದು. ಆದ್ದರಿಂದ ಕೃಷ್ಣ ಮತ್ತು ಗೋವಿಂದರಂತಹ ಲಕ್ಷೋಪಲಕ್ಷ ನಾಮಗಳನ್ನು ಹೊಂದಿರುವಿ. ಈ ದಿವ್ಯ ನಾಮಗಳಲ್ಲಿ ನೀನು ನಿನ್ನ ಸಕಲ ದಿವ್ಯಶಕ್ತಿಗಳನ್ನು ನಿಹಿತಗೊಳಿಸಿರುವಿ. ಈ ಪುಣ್ಯನಾಮಗಳನ್ನು ಕೀರ್ತಿಸಲು ಕಟ್ಟುನಿಟ್ಟಾದ ನಿಯಮಗಳೇನೂ ಇಲ್ಲ. ಹೇ ಪ್ರಭುವೇ, ನೀನು ನಿನ್ನ ಪುಣ್ಯನಾಮಗಳ ಮೂಲಕ ನಿನ್ನನ್ನು ಸೇರುವುದನ್ನು ನಿನ್ನ ಅಪಾರ ದಯೆಯಿಂದ ಸುಲಭಗೊಳಿಸಿರುವಿ. ಆದರೆ ದುರ್ದೈವಿಯಾದ ನಾನು ಅವುಗಳ ಬಗ್ಗೆ ಆಕರ್ಷಣೆ ಹೊಂದಿಲ್ಲ" (**ಶಿಕ್ಷಾಷ್ಟಕಮ್**-2).

ಕೇವಲ ಕೀರ್ತನ ಮಾತ್ರದಿಂದ ನಾವು ಕೃಷ್ಣನ ವ್ಯಕ್ತಿಗತ ಸಂಗದ ಎಲ್ಲಾ ಪ್ರಯೋಜನಗಳನ್ನು ಹೊಂದಬಹುದು. ಕೇವಲ ಸಾಕ್ಷಾತ್ಕೃತ ಆತ್ಮವೆಂದು ಭಾವಿಸುವುದಲ್ಲದೆ, ಸ್ವಯಂ ಕೃಷ್ಣನ ಅವತಾರವೆಂದು ಪರಿಗಣಿಸಲ್ಪಡುವ ಶ್ರೀ ಚೈತನ್ಯ ಮಹಾಪ್ರಭುಗಳು, ಈ ಕಲಿಯುಗದಲ್ಲಿ ಜನರಿಗೆ ಆತ್ಮಸಾಕ್ಷಾತ್ಕಾರದ ನಿಜ ಸೌಲಭ್ಯಗಳು ಇಲ್ಲವಾದರೂ, ಈ ಶಬ್ದವನ್ನು (ಶಬ್ದಾವತಾರದ) ಯುಗಧರ್ಮವಾಗಿ ವಿನಿಯೋಗಿಸಲು· ನೀಡುವಷ್ಟು ಕೃಷ್ಣನು ಕೃಪಾಮಯನಾಗಿದ್ದಾನೆ ಎಂದು

ಸೂಚಿಸುತ್ತಾರೆ. ಈ ವಿಧಾನಕ್ಕೆ ಯಾವ ವಿಶೇಷ ಅರ್ಹತೆ ಅವಶ್ಯವಿಲ್ಲ. ನಾವು ಸಂಸ್ಕೃತವನ್ನೂ ಕೂಡ ತಿಳಿಯಬೇಕಾಗಿಲ್ಲ. ಹರೇಕೃಷ್ಣ ಶಬ್ದೋಚ್ಚಾರಗಳು ಅದೆಷ್ಟು ಶಕ್ತಿಯುತವೆಂದರೆ ಯಾವನೊಬ್ಬನು ಸಂಸ್ಕೃತ ಜ್ಞಾನ ಯಾವುದೂ ಇಲ್ಲದೆ ಕೂಡಲೇ ಅವುಗಳನ್ನು ಜಪಿಸಲಾರಂಭಿಸಬಹುದು.

**ವೇದೇಷು ಯಜ್ಞೇಷು ತಪಃಸು ಚೈವ ದಾನೇಷು ಯತ್ ಪುಣ್ಯಫಲಂ ಪ್ರದಿಷ್ಟಮ್ ।**

**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀಪರಂ ಸ್ಥಾನಮುಪೈತಿ ಚಾದ್ಯಮ್ ॥**

"ಭಕ್ತಿಯುತ ಸೇವಾಮಾರ್ಗವನ್ನು ಅಂಗೀಕರಿಸುವ ವ್ಯಕ್ತಿಗೆ, ವೇದಗಳ ಅಧ್ಯಯನದಿಂದ ಕಠಿಣ ಯಾಗಗಳ ಆಚರಣೆಯಿಂದ, ದಾನ ಕೊಡುವುದರಿಂದ ಅಥವಾ ತಾತ್ತ್ವಿಕ ಮತ್ತು ಕಾಮ್ಯಕಾರ್ಯಗಳ ಅನುಸರಣೆಯಿಂದ, ಪಡೆಯ ಬಹುದಾದ ಫಲಗಳು ದೊರೆಯದೇ ಇರುವುದಿಲ್ಲ, ಭಕ್ತಿಯುತ ಸೇವಾಚರಣೆಯ ಮಾತ್ರದಿಂದ ಅವನು ಈ ಎಲ್ಲವನ್ನು ಪಡೆಯುತ್ತಾನೆ ಮತ್ತು ಕೊನೆಯಲ್ಲಿ ಅವನು ಪರಮ ಶಾಶ್ವತ ಧಾಮವನ್ನು ಸೇರುತ್ತಾನೆ" (ಭ. ಗೀ. 8.28).

ಜೀವನದ ಅಂತಿಮ ಗುರಿಯನ್ನು ಹೊಂದುವುದು ದೈವತ್ವಕ್ಕೆ ಮರಳುವುದು ಸಕಲವೇದ ಉಪದೇಶಗಳ ಉದ್ದೇಶ ಎಂದು ಇಲ್ಲಿ ಕೃಷ್ಣನು ಹೇಳುತ್ತಾನೆ. ಸಕಲ ದೇಶಗಳ ಸಕಲ ಶಾಸ್ತ್ರಗಳು ಈ ಗುರಿಯನ್ನು ಹೊಂದಿವೆ. ಇದೇ ಸಕಲ ಧರ್ಮ ಸುಧಾರಕರ ಅಥವಾ ಆಚಾರ್ಯರ ಸಂದೇಶ ಕೂಡ ಆಗಿದೆ. ಉದಾಹರಣೆಗೆ ಪಶ್ಚಿಮದಲ್ಲಿ ಯೇಸು ಕ್ರಿಸ್ತನು ಇದೇ ಸಂದೇಶವನ್ನು ಸಾರಿದನು. ಅದೇ ಪ್ರಕಾರ ಶ್ರೀ ಬುದ್ಧ ಮತ್ತು ಮಹಮದರೂ ಕೂಡ. ಯಾರೂ ಕೂಡ ಈ ಭೌತಿಕ ಜಗತ್ತಿನಲ್ಲಿ ನಾವು ತಳವೂರಬೇಕೆಂದು ನಮಗೆ ಹೇಳುವುದಿಲ್ಲ. ದೇಶ ಕಾಲ ಮತ್ತು ಸನ್ನಿವೇಶಾನುಸಾರ ಮತ್ತು ಜ್ಞಾನಾನುಸಾರ ಕೆಲವು ಭೇದಗಳಿರಬಹುದು. ಆದರೆ ನಾವು ಈ ಭೌತಿಕ ಜಗತ್ತಿಗಾಗಿ ಉದ್ದಿಷ್ಟರಲ್ಲ ಆದರೆ, ಆಧ್ಯಾತ್ಮಿಕ ಜಗತ್ತಿಗಾಗಿ ಎಂಬ ಪ್ರಧಾನ ತತ್ತ್ವವು ಎಲ್ಲಾ ನಿಜ ದಿವ್ಯವಾದಿಗಳಿಂದ ಅಂಗೀಕೃತವಾಗಿದೆ. ನಮ್ಮ ಅತ್ಯಂತ ಅಂತರಂಗದ ಆತ್ಮನ ಇಚ್ಛಾತುಷ್ಟಿಯ ಸಕಲ ಸೂಚನೆಗಳು ಜನನ ಮರಣಗಳ ಆಚೆಗಿನ ಕೃಷ್ಣ ಲೋಕಗಳ ಕಡೆಗೆ ಕೈ ತೋರುತ್ತದೆ.

# ಗ್ರಂಥಕರ್ತರು

ಶ್ರೀ ಶ್ರೀಮದ್ ಎ. ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಈ ಜಗತ್ತಿನಲ್ಲಿ 1896ರಲ್ಲಿ ಇಂಡಿಯಾದ ಕಲ್ಕತ್ತದಲ್ಲಿ ಕಾಣಿಸಿಕೊಂಡರು. ತಮ್ಮ ಗುರುಗಳಾದ ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಗೋಸ್ವಾಮಿಯವರನ್ನು 1922ರಲ್ಲಿ ಮೊದಲಬಾರಿಗೆ ಕಲ್ಕತ್ತದಲ್ಲಿ ಸಂಧಿಸಿದರು. ಓರ್ವ ಮಹೋನ್ನತ ಭಕ್ತಿಯುತ ವಿದ್ವಾಂಸರು ಮತ್ತು ಅರವತ್ತನಾಲ್ಕು ಗೌಡೀಯ ಮಠಗಳ (ವೈದಿಕ ಪಾಠಶಾಲೆಗಳ) ಸಂಸ್ಥಾಪನಾಚಾರ್ಯರೂ ಆದ ಶ್ರೀಲ ಭಕ್ತಿ ಸಿದ್ಧಾಂತ ಸರಸ್ವತಿಯವರು, ಈ ವಿದ್ಯಾಸಂಪನ್ನನಾದ ಯುವಕನನ್ನು ಇಷ್ಟಪಟ್ಟು, ಅವನ ಜೀವಮಾನವನ್ನೇ ವೇದಜ್ಞಾನದ ಬೋಧನೆಗೆ ಅಂಕಿತ ಮಾಡಲು ಪೂರ್ಣವಾಗಿ ಮನ ಒಲಿಸಿಕೊಂಡರು. ಶ್ರೀಲ ಪ್ರಭುಪಾದರು ಅವರ ವಿಧ್ಯಾರ್ಥಿಯಾದರು ಮತ್ತು ಹನ್ನೊಂದು ವರ್ಷದ ಬಳಿಕ, ಅವರ ವಿಧಿವಿಹಿತ ದೀಕ್ಷೆಪಡೆದ ಶಿಷ್ಯರಾದರು. 

ಅವರ ಪ್ರಥಮ ಭೇಟಿಯಲ್ಲಿ, ಶ್ರೀಲ ಭಕ್ತಿಸಿದ್ಧಾಂತ ಸರಸ್ವತೀ ಥಾಕೂರರು, ಶ್ರೀಲ ಪ್ರಭುಪಾದರನ್ನು ವೇದಜ್ಞಾನವನ್ನು ಇಂಗ್ಲೀಷ್ ಭಾಷೆಯ ಮೂಲಕ ಪ್ರಸಾರ ಮಾಡಬೇಕೆಂದು ಕೋರಿದರು. ಮುಂದಿನ ವರ್ಷಗಳಲ್ಲಿ ಶ್ರೀಲ ಪ್ರಭುಪಾದರು ಭಗವದ್ಗೀತೆಗೆ ವ್ಯಾಖ್ಯಾನವನ್ನು ಬರೆದರು, ಗೌಡೀಯ ಮಠಕ್ಕೆ ಅದರ ಕಾರ್ಯದಲ್ಲಿ ಸಹಕರಿಸಿದರು ಮತ್ತು 1944ರಲ್ಲಿ **ಬ್ಯಾಕ್ ಟು ಗಾಡ್‌ಹೆಡ್** ಎಂದು ಪ್ರಾರಂಭಿಸಿದ ಇಂಗ್ಲೀಷ್ ಪಾಕ್ಷಿಕ ಸಂಕೀರ್ಣ ಪತ್ರಿಕೆಯು, ಈಗಲೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿನ ಅವರ ಶಿಷ್ಯರುಗಳಿಂದ ಮುವ್ವತ್ತಕ್ಕಿಂತ ಅಧಿಕ ಭಾಷೆಗಳಲ್ಲಿ ಮುಂದುವರಿಯುತ್ತಲಿದೆ.

ಶ್ರೀಲ ಪ್ರಭುಪಾದರ ವೇದಾಂತ ಜ್ಞಾನ ಮತ್ತು ಭಕ್ತಿಯನ್ನು ಗುರುತಿಸಿ ಗೌಡೀಯ ವೈಷ್ಣವ ಸಂಘವು 1947ರಲ್ಲಿ "ಭಕ್ತಿವೇದಾಂತ" ಎಂಬ ಬಿರುದನ್ನು ನೀಡಿ ಅವರನ್ನು ಗೌರವಿಸಿತು. 1950ರಲ್ಲಿ ಶ್ರೀಲ ಪ್ರಭುಪಾದರು ತಮ್ಮ ಐವತ್ನಾಲ್ಕನೆಯ ವರ್ಷದಲ್ಲಿ ವೈವಾಹಿಕ ಜೀವನದಿಂದ ನಿವೃತ್ತರಾದರು ಮತ್ತು ತಮ್ಮ ಅಭ್ಯಾಸ ಮತ್ತು ಬರವಣಿಗೆಗಾಗಿ ಹೆಚ್ಚು ಕಾಲವನ್ನು ವಿನಿಯೋಗಿಸಲು ವಾನಪ್ರಸ್ಥ ಆಶ್ರಮವನ್ನು ಸ್ವೀಕರಿಸಿದರು. ಶ್ರೀಲ ಪ್ರಭುಪಾದರು ಪವಿತ್ರವಾದ ವೃಂದಾವನಕ್ಕೆ ಪ್ರಯಾಣ ಮಾಡಿ, ಅಲ್ಲಿನ ಚಾರಿತ್ರಿಕ ಮಧ್ಯಯುಗದ ರಾಧಾ-ದಾಮೋದರ ದೇವಾಲಯದಲ್ಲಿ

ಬಹಳ ನಿರಾಡಂಬರವಾಗಿ ಜೀವನವನ್ನು ಸಾಗಿಸಿದರು. ಅಲ್ಲಿ ಅವರು ಹಲವು ವರ್ಷಗಳ ಕಾಲ ಆಳವಾದ ಅಭ್ಯಾಸ ಮತ್ತು ಬರಹದಲ್ಲಿ ನಿರತರಾಗಿದ್ದರು. ಅವರು 1956ರಲ್ಲಿ ಸನ್ಯಾಸವನ್ನು ಸ್ವೀಕರಿಸಿದರು. ರಾಧಾ-ದಾಮೋದರ ದೇವಾಲಯದಲ್ಲಿ ಶ್ರೀಲ ಪ್ರಭುಪಾದರು **ಶ್ರೀಮದ್ಭಾಗವತದ (ಭಾಗವತ ಪುರಾಣ)** ಹದಿನೆಂಟು ಸಾವಿರ ಶ್ಲೋಕಗಳಿಗೆ ಭಾಷಾಂತರ ಮತ್ತು ವ್ಯಾಖ್ಯಾನಗಳನ್ನೊಳಗೊಂಡ ಅನೇಕ ಸಂಪುಟಗಳ ರಚನೆಯ, ತಮ್ಮ ಜೀವನದ ಅದ್ಭುತ ಕಾರ್ಯವನ್ನು ಆರಂಭಿಸಿದರು. ಅವರು "**ಇತರ ಲೋಕಗಳಿಗೆ ಸುಲಭ ಪ್ರಯಾಣ**" ಎಂಬ ಕೃತಿಯನ್ನೂ ಬರೆದರು.

**ಶ್ರೀಮದ್ಭಾಗವತದ** ಮೂರು ಸಂಪುಟಗಳನ್ನು ಪ್ರಕಾಶನ ಮಾಡಿದ ನಂತರ, ತಮ್ಮ ಗುರುಗಳ ಆದೇಶವನ್ನು ನೆರವೇರಿಸಲು ಶ್ರೀಲ ಪ್ರಭುಪಾದರು 1965ರಲ್ಲಿ ಅಮೆರಿಕೆಗೆ ಬಂದರು. ಆಗಿನಿಂದ ಅವರು, ಭಾರತದ ವೇದಾಂತ ಮತ್ತು ಧಾರ್ಮಿಕ ಮಹಾಗ್ರಂಥಗಳಿಗೆ ಅರವತ್ತು ಸಂಪುಟಗಳಿಗೂ ಹೆಚ್ಚಾಗಿ ಪ್ರಾಮಾಣಿಕ ಭಾಷಾಂತರಗಳು, ವ್ಯಾಖ್ಯಾನಗಳು ಮತ್ತು ಶ್ರೇಷ್ಠ ತಾತ್ತ್ವಿಕ ಮತ್ತು ಧಾರ್ಮಿಕ ಸಾಹಿತ್ಯಗಳ ಸಾರಾಂಶೀಕೃತ ಪರಾಮರ್ಶೆಗಳನ್ನು ಬರೆದಿದ್ದಾರೆ.

1965ರಲ್ಲಿ ಅವರು ಮೊದಲು ನ್ಯೂಯಾರ್ಕ್ ನಗರಕ್ಕೆ ಹಡಗಿನಲ್ಲಿ ಬಂದಾಗ, ಶ್ರೀಲ ಪ್ರಭುಪಾದರಲ್ಲಿ ಹಣವೇ ಇರಲಿಲ್ಲ. ಅತಿ ಕಷ್ಟದ ಒಂದು ವರ್ಷದ ನಂತರ 1966ರ ಜುಲೈಯಲ್ಲಿ ಅವರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವನ್ನು ಸ್ಥಾಪಿಸಿದರು. 14ನೆಯ ನವೆಂಬರ್ 1977ರಲ್ಲಿ ಭಗವದ್ಧಾಮವನ್ನು ಸೇರುವ ಮುಂಚೆ, ಸಂಘವನ್ನು ಮಾರ್ಗದರ್ಶಿಸಿದರು ಮತ್ತು ಅದು ನೂರಕ್ಕಿಂತ ಮಿಗಿಲಾದ ಆಶ್ರಮಗಳು, ಪಾಠಶಾಲೆಗಳು ದೇವಾಲಯಗಳು ಕುಶಲ ಕಲಾ ಶಾಲೆಗಳು ಮತ್ತು ವ್ಯವಸಾಯ ಕ್ಷೇತ್ರಗಳನ್ನು ಒಳಗೊಂಡ ವಿಶ್ವವ್ಯಾಪಿ ಸಂಯೋಜಿತ ಸಂಸ್ಥೆಯಾಗಿ ಬೆಳೆಯುವುದನ್ನು ವೀಕ್ಷಿಸಿದರು.

ನವ ವೃಂದಾವನವೆಂಬ ಒಂದು ಪ್ರಾಯೋಗಿಕ ವೈದಿಕ ಕ್ಷೇತ್ರವನ್ನು ಪಶ್ಚಿಮ ವರ್ಜಿನಿಯಾದಲ್ಲಿ ಸ್ಥಾಪಿಸಿದರು ಮತ್ತು ವೈದಿಕ ಗುರುಕುಲ ಪದ್ಧತಿಯ ಶಿಕ್ಷಣವನ್ನು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪ್ರಾರಂಭಿಸಿದವರೂ ಶ್ರೀಲ ಪ್ರಭುಪಾದರವರೇ.

ಶ್ರೀಲ ಪ್ರಭುಪಾದರು ಭಾರತದಲ್ಲಿ ಹಲವಾರು ಅಂತಾರಾಷ್ಟ್ರೀಯ ಕೇಂದ್ರಗಳ ನಿರ್ಮಾಣವನ್ನೂ ಪ್ರೋತ್ಸಾಹಿಸಿದರು. ಪಶ್ಚಿಮ ಬಂಗಾಲದಲ್ಲಿರುವ ಶ್ರೀಧಾಮ ಮಾಯಾಪುರದ ಕೇಂದ್ರದಲ್ಲಿನ ನಿವೇಶನವು ಯೋಜಿತ ಆಧ್ಯಾತ್ಮ ನಗರಕ್ಕಾಗಿ ಉದ್ದಿಷ್ಟವಾಗಿದೆ. ಈ ಮಹದಾಕಾಂಕ್ಷೆಯ ಯೋಜನೆಯ ನಿರ್ಮಾಣವು ಮುಂದಿನ

ದಶಕದ ಆಚೆಗೂ ವಿಸ್ತರಿಸುವುದು. ಭಾರತದ ವೃಂದಾವನದಲ್ಲಿ ಭವ್ಯವಾದ ಕೃಷ್ಣ-ಬಲರಾಮ ದೇವಾಲಯ ಮತ್ತು ಅಂತಾರಾಷ್ಟ್ರೀಯ ಅತಿಥಿಗೃಹ, ಶ್ರೀಲ ಪ್ರಭುಪಾದರ ಸ್ಮಾರಕ ಮತ್ತು ವಸ್ತು ಸಂಗ್ರಹಾಲಯಗಳಿವೆ. ಬೊಂಬಾಯಿಯಲ್ಲಿಯೂ ಸಹ ಒಂದು ದೊಡ್ಡ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕೇಂದ್ರವಿದೆ. ಭಾರತದ ಉಪಖಂಡದಲ್ಲಿನ ಹನ್ನೆರಡು ಮುಖ್ಯ ಸ್ಥಳಗಳಲ್ಲಿ ಇತರ ಕ್ಷೇತ್ರಗಳು ಯೋಜಿತವಾಗಿವೆ.

ಶ್ರೀಲ ಪ್ರಭುಪಾದರ ಅತ್ಯಂತ ಪರಿಣಾಮಕಾರಿ ಕೊಡುಗೆಯು ಅವರ ಪುಸ್ತಕಗಳೇ ಆಗಿವೆ. ಅವುಗಳ ಪ್ರಾಮಾಣ್ಯ, ಗಹನ ವಿಚಾರ ಮತ್ತು ಸ್ಪಷ್ಟತೆಗಳಿಗಾಗಿ ಶಿಕ್ಷಣಕ್ಷೇತ್ರದಿಂದ ಬಹುಗೌರವಯುತವಾಗಿ ಅವುಗಳನ್ನು ಅನೇಕ ಕಾಲೇಜುಗಳ ಶಿಕ್ಷಣ ಪದ್ಧತಿಯಲ್ಲಿ ಪಠ್ಯಪುಸ್ತಕಗಳಾಗಿ ಉಪಯೋಗಿಸಲಾಗುತ್ತಿದೆ. ಅವರ ಬರಹಗಳು ಮುವ್ವತ್ತಕ್ಕಿಂತಲೂ ಹೆಚ್ಚಿನ ಭಾಷೆಗಳಿಗೆ ಭಾಷಾಂತರವಾಗಿವೆ. ಅವರ ಕೃತಿಗಳನ್ನು ಪ್ರಕಾಶನ ಮಾಡುವುದಕ್ಕಾಗಿ 1972ರಲ್ಲಿ ಸ್ಥಾಪಿಸಲ್ಪಟ್ಟ ಭಕ್ತಿವೇದಾಂತ ಬುಕ್ ಟ್ರಸ್ಟ್ ಸಂಸ್ಥೆಯು ಭಾರತದ ಧರ್ಮ ಮತ್ತು ದರ್ಶನ ಕ್ಷೇತ್ರದಲ್ಲಿ ಪ್ರಪಂಚದ ಬೃಹತ್ ಪ್ರಕಾಶನ ಸಂಸ್ಥೆಯಾಗಿದೆ.

ಕೇವಲ ಹನ್ನೆರಡು ವರ್ಷಗಳಲ್ಲಿ, ತಮ್ಮ ವೃದ್ಧಾಪ್ಯದೆಶೆಯಲ್ಲಿಯೂ ಕೂಡ, ಶ್ರೀಲ ಪ್ರಭುಪಾದರು ಪ್ರವಚನ ಪ್ರವಾಸಗಳಿಗಾಗಿ ಭೂಮಂಡಲವನ್ನು ಹದಿನಾಲ್ಕು ಸಲ ಪರ್ಯಟನೆ ಮಾಡಿ ಆರು ಖಂಡಗಳಿಗೂ ಹೋದರು. ಅಂತಹ ಓಜೋಪೂರ್ಣ ಕಾರ್ಯಕ್ರಮವಿದ್ದರೂ, ಶ್ರೀಲ ಪ್ರಭುಪಾದರು ಫಲಪ್ರದವಾಗಿ ಬರೆಯುವುದನ್ನು ಮುಂದುವರಿಸಿದರು. ವೇದಾಂತ, ಧರ್ಮ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಒಳಗೊಂಡಿರುವ ಅವರ ಲೇಖನಗಳು ನಿಜವಾದ ಗ್ರಂಥಾಲಯವಾಗಿ ಪರಿಣಮಿಸಿವೆ.

# ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವೆಂದರೇನು?

ಹರೇಕೃಷ್ಣ ಆಂದೋಲನವೆಂದು ಪ್ರಸಿದ್ಧವಾಗಿರುವ ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವು (ಇಸ್ಕಾನ್), ಪರಮ ದೇವೋತ್ತಮ ಪುರುಷನಾದ ಕೃಷ್ಣನ ಭಕ್ತರ ಜಾಗತಿಕ ಸಂಘ. ದೇವರು ತನ್ನ ನಾನಾ ಗುಣ ಲೀಲೆಗಳಿಗನುಸಾರವಾಗಿ ಅನೇಕ ನಾಮಗಳಿಂದ ಕರೆಯಲ್ಪಡುತ್ತಾನೆ. ಬೈಬಲಿನಲ್ಲಿ ಅವನು ಜೆಹೋವಾ ("ಸರ್ವಶಕ್ತನು"), ಕುರಾನಿನಲ್ಲಿ ಅಲ್ಲಾ ("ಮಹಾ ಪುರುಷನು") ಮತ್ತು ಭಗವದ್ಗೀತೆಯಲ್ಲಿ ಕೃಷ್ಣ, "ಸರ್ವಾಕರ್ಷಕನು" ಎಂಬ ಸಂಸ್ಕೃತದ ಹೆಸರಿನಿಂದ ಕರೆಯಲ್ಪಡುತ್ತಾನೆ.

ಭಗವತ್ಪ್ರಜ್ಞೆಯ (ಕೃಷ್ಣಪ್ರಜ್ಞೆಯ) ವಿಜ್ಞಾನವನ್ನು ಭಾರತದ ಸನಾತನ ವೇದಶಾಸ್ತ್ರಗಳಿಗನುಸಾರವಾಗಿ ಬೋಧಿಸಿ ಮಾನವ ಕಲ್ಯಾಣವನ್ನು ವೃದ್ಧಿಗೊಳಿಸುವುದು ಈ ಆಂದೋಲನದ ಮುಖ್ಯ ಉದ್ದೇಶ.

ಅಂತಾರಾಷ್ಟ್ರೀಯ ಧಾರ್ಮಿಕ ಮತ್ತು ವಿದ್ವತ್ ಸಮುದಾಯಗಳಲ್ಲಿ ಅನೇಕ ಮುಖ್ಯರು ಈ ಆಂದೋಲನದ ಪ್ರಾಮಾಣ್ಯವನ್ನು ದೃಢಪಡಿಸಿದ್ದಾರೆ. ಹಾರ್ವರ್ಡ್ ವಿಶ್ವವಿದ್ಯಾನಿಲಯದ ತುಲನಾತ್ಮಕ ಧರ್ಮ ಮತ್ತು ಭಾರತೀಯ ಅಧ್ಯಯನಗಳ ಪ್ರಾಧ್ಯಾಪಕರಾದ ಡಯಾನಾ ಎಲ್. ಎಕ್. ಅವರು ಈ ಆಂದೋಲನವನ್ನು 'ಮಾನವ ಕುಲದ ಧಾರ್ಮಿಕ ಜೀವನದಲ್ಲಿ ಗಣ್ಯಸ್ಥಾನ ಗಳಿಸಿರುವ ಒಂದು ಸಂಪ್ರದಾಯ" ಎಂದು ವರ್ಣಿಸುತ್ತಾರೆ.

1965ರಲ್ಲಿ, ತಮ್ಮ ಶಿಷ್ಯರಿಗೆ ಶ್ರೀಲ ಪ್ರಭುಪಾದರೆಂದು ಪ್ರಸಿದ್ಧರಾಗಿದ್ದ ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿಗಳು, ಕೃಷ್ಣಪ್ರಜ್ಞೆಯನ್ನು ಅಮೇರಿಕಾಕ್ಕೆ ತಂದರು. ಅವರು ಅಮೇರಿಕಾಕ್ಕೆ ಬಂದಿಳಿದ ದಿನ, ತಮ್ಮ ಡೈರಿಯಲ್ಲಿ ಹೀಗೆ ಬರೆದರು: "ನನ್ನ ಪ್ರಿಯ ಶ್ರೀಕೃಷ್ಣನೇ, ಈ ದಿವ್ಯ ಸಂದೇಶವು ಅವರ ಹೃದಯಗಳಲ್ಲಿ ನಾಟಿದಾಗ ಖಂಡಿತವಾಗಿ ಅವರು ಹರ್ಷಭರಿತರಾಗುತ್ತಾರೆ ಮತ್ತು ಹೀಗೆ ಜೀವನದ ಸಕಲ ಅಸಂತುಷ್ಟ ಸನ್ನಿವೇಶಗಳಿಂದ ಮುಕ್ತರಾಗುತ್ತಾರೆ, ಎಂಬುದು ನನಗೆ ಖಚಿತ." ಅವರು ಆಗ ಅರವತ್ತೊಂಬತ್ತು ವರ್ಷದವರಾಗಿದ್ದು ಅಲ್ಪ ಹಣವಿಟ್ಟುಕೊಂಡು

ಒಬ್ಬರೇ ಬಂದಿದ್ದರು. ಆದರೆ ಅವರು ಹೊಂದಿದ್ದ ಆಧ್ಯಾತ್ಮಿಕ ಜ್ಞಾನ ಮತ್ತು ಭಕ್ತಿಗಳ ಸಂಪತ್ತು ಅವರ ಶಕ್ತಿ ಮತ್ತು ಪ್ರೇರಣೆಗೆ ಅಚಲ ಮೂಲವಾಗಿತ್ತು.

"ಬಹುತೇಕ ಜನರು ತಮ್ಮ ಕೀರ್ತಿಯನ್ನವಲಂಬಿಸಿ ವಿರಮಿಸುವ ವೃದ್ಧಾಪ್ಯದಲ್ಲಿ, ಶ್ರೀಲ ಪ್ರಭುಪಾದರು ತಮ್ಮ ಗುರುಗಳ ಆದೇಶಕ್ಕೆ ತಲೆಬಾಗಿ ಬಹುಕಷ್ಟದಾಯಕವಾದ ಅಮೇರಿಕಾ ಪ್ರಯಾಣಕ್ಕೆ ಹೊರಟರು. ಶ್ರೀಲ ಪ್ರಭುಪಾದರು ಸಹಸ್ರಾರು ಬೋಧಕರಲ್ಲಿ ಒಬ್ಬರು. ಆದರೆ ಬೇರೊಂದು ಅರ್ಥದಲ್ಲಿ ಅವರು ಸಾವಿರಕ್ಕೊಬ್ಬರು, ಲಕ್ಷಕ್ಕೊಬ್ಬರು ಆಗಿರಬಹುದಾಗಿದೆ" ಎಂದು ಹಾರ್ವರ್ಡ್ ವಿಶ್ವವಿದ್ಯಾಲಯದ ಮನಶಾಸ್ತ್ರಜ್ಞರೂ ಗ್ರಂಥಕರ್ತರೂ ಆದ ಹಾರ್ವೇ ಕಾಕ್ಸ್ ಬರೆದಿದ್ದಾರೆ.

1966ರಲ್ಲಿ ಶ್ರೀಲ ಪ್ರಭುಪಾದರು ಅಂತಾರಾಷ್ಟ್ರೀಯ ಕೃಷ್ಣಪ್ರಜ್ಞಾ ಸಂಘವನ್ನು ಸ್ಥಾಪಿಸಿದರು, ಅದು ಹರೇಕೃಷ್ಣ ಆಂದೋಲನದ ವ್ಯವಹಾರ ನಾಮವಾಯಿತು.

## ವಿಸ್ಮಯಕಾರಿ ಬೆಳವಣಿಗೆ

ಮುಂದಿನ ವರ್ಷಗಳಲ್ಲಿ, ಶ್ರೀಲ ಪ್ರಭುಪಾದರು ಕ್ರಮೇಣ ಹತ್ತಾರು ಸಾವಿರ ಶಿಷ್ಯರನ್ನು ಆಕರ್ಷಿಸಿದರು, ನೂರಕ್ಕಿಂತ ಹೆಚ್ಚು ಮಂದಿರ ಮತ್ತು ಆಶ್ರಮಗಳನ್ನು ಪ್ರಾರಂಭಿಸಿದರು ಮತ್ತು ಅನೇಕ ಗ್ರಂಥಗಳನ್ನು ಪ್ರಕಟಿಸಿದರು. ಇಪ್ಪತ್ತನೆಯ ಶತಮಾನದ ಪಾಶ್ಚಾತ್ಯ ಜಗತ್ತಿನಲ್ಲಿ ಭಾರತದ ಪ್ರಾಚೀನ ಆಧ್ಯಾತ್ಮಿಕ ಸಂಸ್ಕೃತಿಯನ್ನು ಸ್ಥಾಪಿಸಿದುದೇ ಅವರ ಅದ್ಭುತ ಸಾಧನೆಯಾಗಿದೆ.

ಜಗತ್ತಿನಲ್ಲೆಲ್ಲ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಕೃಷ್ಣನ ನೂತನ ಭಕ್ತರು ಸಂಕೀರ್ತನೆ ಮಾಡುವ ಮತ್ತು ಶ್ರೀಲ ಪ್ರಭುಪಾದರ ವೇದಜ್ಞಾನದ ಗ್ರಂಥಗಳ ವಿತರಣೆ ಮಾಡುವ ದೃಶ್ಯವು ಎಲ್ಲ ಕಡೆಯಲ್ಲಿ ಬಹು ಬೇಗನೆ ಕಾಣತೊಡಗಿತು. ಅವರು ವರ್ಷದುದ್ದಕ್ಕೂ ಆನಂದಕರ ಸಾಂಸ್ಕೃತಿಕ ಉತ್ಸವಗಳನ್ನು ಆಚರಿಸಲು ಮತ್ತು ಕೃಷ್ಣಾರ್ಪಿತವಾದ (ಪ್ರಸಾದವೆಂಬ) ಆಪ್ಯಾಯಮಾನವಾದ ಆಹಾರವನ್ನು ಲಕ್ಷೋಪಲಕ್ಷ ಜನರಿಗೆ ಜಗತ್ತಿನಲ್ಲೆಲ್ಲಾ ವಿತರಿಸಲು ಪ್ರಾರಂಭಿಸಿದರು. ಪರಿಣಾಮವಾಗಿ, ಇಸ್ಕಾನ್ ಸಾವಿರಾರು ಜನರ ಜೀವನದ ಮೇಲೆ ಸಾಕಷ್ಟು ಪರಿಣಾಮ ಬೀರಿತು. ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯ ಜಗತ್ತಿನ ಪ್ರಮುಖ ಗ್ರಂಥಕರ್ತರಲ್ಲಿ ಒಬ್ಬರಾದ ದಿವಂಗತ ಎ. ಎಲ್. ಭಾಷಮ್ ಹೀಗೆ ಬರೆಯುತ್ತಾರೆ: "ಹರೇಕೃಷ್ಣ ಆಂದೋಲನವು ಯಾವ ಸಂಪನ್ಮೂಲಗಳೂ ಇಲ್ಲದೆ ಇಪ್ಪತ್ತಕ್ಕಿಂತ ಕಡಿಮೆ ವರ್ಷಗಳಲ್ಲಿ ಬೆಳೆದು ಇಡೀ ಪಾಶ್ಚಾತ್ಯ ಜಗತ್ತಿಗೆ

ಪರಿಚಿತವಾಗಿದೆ. ಪಾಶ್ಚಾತ್ಯ ಜಗತ್ತಿನ ಇತಿಹಾಸದಲ್ಲಿ ಇದೊಂದು ಮಹತ್ವದ ಸಂಗತಿ."

## ಐದು ಸಾವಿರ ವರ್ಷಗಳ ಆಧ್ಯಾತ್ಮಿಕ ಜ್ಞಾನ

ವಿಶ್ವಾದ್ಯಂತ ವಿದ್ವಾಂಸರು ಶ್ರೀಲ ಪ್ರಭುಪಾದರ ವೇದಸಾಹಿತ್ಯದ ಭಾಷಾಂತರಗಳನ್ನು ಕೊಂಡಾಡಿದ್ದಾರೆ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ತತ್ತ್ವಜ್ಞಾನ ವಿಭಾಗದ ಪ್ರಾಧ್ಯಾಪಕರಾದ ಗ್ಯಾರಿ ಜೆಲೇಡ್ ಅವರು ಅವುಗಳನ್ನು ಕುರಿತು ಹೀಗೆ ಬರೆಯುತ್ತಾರೆ: "ಈ ಗ್ರಂಥಗಳನ್ನು ಅಮೂಲ್ಯ ನಿಧಿಯಾಗಿ ಕಾಯ್ದಿರಿಸಿಕೊಳ್ಳಬೇಕು. ಯಾವುದೇ ಮತ ಅಥವಾ ದರ್ಶನದ ಅನುಯಾಯಿ ಯಾಗಿರುವ ಯಾರೇ ಇರಲಿ ಮುಕ್ತಮನಸ್ಸಿನಿಂದ ಈ ಗ್ರಂಥಗಳನ್ನು ಓದಿದಾಗ ಪ್ರಭಾವಿತನಾಗದೇ ಇರಲಾರನು" ಮತ್ತು ಬಕ್‌ನೆಲ್ ವಿಶ್ವವಿದ್ಯಾನಿಲಯದ ಕಲೆ ಮತ್ತು ವಿಜ್ಞಾನಗಳ ಕಾಲೇಜಿನ ಡೀನ್ ಆಗಿರುವ ಡಾ. ಲ್ಯಾರಿಷಿನ್ ಅವರು ಹೀಗೆ ಬರೆಯುತ್ತಾರೆ: "ಪ್ರಭುಪಾದರ ವೈಯಕ್ತಿಕ ದೈವಭಕ್ತಿಯು ಅವರಿಗೆ ನಿಜಾಧಿಕಾರ ನೀಡಿತು. ಅವರು ಶಾಸ್ತ್ರಗಳ ಬಗ್ಗೆ ಸಂಪೂರ್ಣ ಪ್ರಭುತ್ವವನ್ನು ಸಾಕ್ಷಾತ್ಕಾರದ ಅಸಾಧಾರಣ ಆಳವನ್ನು ಮತ್ತು ಅಪ್ರತಿಮ ವೈಯಕ್ತಿಕ ಉದಾಹರಣೆಯನ್ನು ತೋರಿದರು, ಏಕೆಂದರೆ ಅವರು ವಸ್ತುತಃ ತಾವು ನುಡಿದಂತೆ ನಡೆದರು."

ಬಹು ಪ್ರಸಿದ್ಧ ವೇದಸಾಹಿತ್ಯವಾದ **ಭಗವದ್ಗೀತೆಯೇ** ("ದೇವಗೀತೆ"), ಹರೇಕೃಷ್ಣ ಆಂದೋಲನದ ತಾತ್ವಿಕ ಆಧಾರವಾಗಿದೆ. ಇದು ಐದು ಸಾವಿರ ವರ್ಷಕ್ಕಿಂತ ಮುಂಚಿನದಾಗಿದ್ದು 700 ದಶಲಕ್ಷಕ್ಕಿಂತ ಹೆಚ್ಚಿನ ಜನರಿಗೆ ಈಗ ಪವಿತ್ರ ಗ್ರಂಥವಾಗಿದೆ.

ಈ ಶ್ರೇಷ್ಠ ಕೃತಿಯು ಜಗತ್ತಿನಲ್ಲೆಲ್ಲಾ ವಿದ್ವಾಂಸರು ಮತ್ತು ಜನನಾಯಕರಿಂದ ಪ್ರಶಂಸಿತವಾಗಿದೆ. ಗಾಂಧೀಜಿ ಹೀಗೆ ನುಡಿದರು: "ನನಗೆ ಸಂದೇಹಗಳು ಕಾಡಿದಾಗ, ನಿರಾಶೆಯು ಇದಿರಾದಾಗ, ಆಶಾಕಿರಣವನ್ನೇ ನಾನು ಕಾಣದಿರುವಾಗ, ನಾನು ಭಗವದ್ಗೀತೆಯ ಕಡೆಗೆ ತಿರುಗುತ್ತೇನೆ ಮತ್ತು ನನ್ನನ್ನು ಸಮಾಧಾನ ಪಡಿಸುವ ಒಂದು ಶ್ಲೋಕವನ್ನು ಅಲ್ಲಿ ಕಾಣುತ್ತೇನೆ." ರಾಲ್ಫ್‌ವಾಲ್ಡೋ ಎಮರ್ಸನ್ ಹೀಗೆ ಬರೆಯುತ್ತಾರೆ: "ಅದು ಆದಿ ಗ್ರಂಥ, ಒಂದು ಸಾಮ್ರಾಜ್ಯವೇ ನಮ್ಮೊಡನೆ ಮಾತಾಡಿದಂತಿದೆ. ಏಷ್ಟೂ ಅಲ್ಪವಾದುದಲ್ಲ ಅಥವಾ ಅನರ್ಹವಾದುದಲ್ಲ, ಆದರೆ ಬಹು ವಿಶಾಲವಾದುದು, ಮನೋಜ್ಞವಾದುದು ಮತ್ತು ಸುಸಂಗತವಾದುದು. ಪ್ರಾಚೀನ ಬುದ್ಧಿಮತ್ತೆಯ ಧ್ವನಿ, ಅದು ಮತ್ತೊಂದು ಯುಗ ಮತ್ತು

ವಾತಾವರಣಗಳಲ್ಲಿ ಜಿಜ್ಞಾಸೆ ನಡೆಸಿ ಇಂದು ನಮ್ಮನ್ನು ಕಾಡುವ ಅದೇ ಪ್ರಶ್ನೆಗಳಿಗ ಉತ್ತರ ನೀಡಿದೆ.'' ಗೀತೆಯ ಪರಿಚಯವುಳ್ಳ ಯಾರಿಗೇ ಆಗಲಿ ಹೆನ್ರಿ ಡೆವಿಡ್ ಥೋರೋ ಅವರು ನುಡಿದ ''ಪ್ರಾತಃಕಾಲದಲ್ಲಿ ನಾನು ನನ್ನ ಬುದ್ಧಿಗೆ ಅದ್ಭುತವ ವಿಶ್ವವ್ಯಾಪಿಯೂ ಆದ ಭಗವದ್ಗೀತಾ ದರ್ಶನದಿಂದ ಸ್ನಾನ ಮಾಡಿಸುತ್ತೇನೆ'' ಎಂಬ ಮಾತು ಆಶ್ಚರ್ಯವೇನಲ್ಲ.

ನಾವು ಈ ಭೌತಿಕ ಅನಿತ್ಯ ಶರೀರಗಳಲ್ಲ, ಚೇತನಾತ್ಮರು ಅಥವಾ ಪ್ರಜ್ಞೆಯುಳ್ಳ ಜೀವಿಗಳು ಮತ್ತು ನಾವು ಭಗವಂತನ ಆಧ್ಯಾತ್ಮಿಕ ಭಕ್ತಿಯಲ್ಲಿ ಮಾತ್ರ ನಿಜವಾದ ಸುಖ ಮತ್ತು ಶಾಂತಿಗಳನ್ನು ಕಾಣಬಲ್ಲೆವು ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಬೋಧಿಸುತ್ತಾನೆ. ಜನರು ಆನಂದದಿಂದ ಕೃಷ್ಣ, ಅಲ್ಲಾ ಮತ್ತು ಜೆಹೋವಾ ಎಂಬ ಭಗವಂತನ ಪುಣ್ಯನಾಮಗಳನ್ನು ಕೀರ್ತಿಸಬೇಕೆಂದು ಗೀತೆ ಮತ್ತು ಜಗತ್ತಿನ ಇತರ ಪ್ರಸಿದ್ಧ ಶಾಸ್ತ್ರಗಳು ಹೇಳುತ್ತವೆ.

## ಹದಿನಾರನೆಯ ಶತಮಾನದ ಕೃಷ್ಣನ ಅವತಾರ

ಹದಿನಾರನೆಯ ಶತಮಾನದಲ್ಲಿ ಅವತರಿಸಿದ ಕೃಷ್ಣನ ಪೂರ್ಣಾವತಾರರಾದ ಶ್ರೀ ಚೈತನ್ಯ ಮಹಾಪ್ರಭುಗಳು ಭಾರತದಲ್ಲೆಲ್ಲಾ ಭಗವಂತನ ನಾಮ ಸಂಕೀರ್ತನೆಯನ್ನು ಜನಪ್ರಿಯಗೊಳಿಸಿದರು. ಅವರು ವೇದಸಾಹಿತ್ಯದಲ್ಲಿ ವಿಧಿಸಿದ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂಬ ಭಗವನ್ನಾಮಗಳನ್ನು ನಿರಂತರವಾಗಿ ಕೀರ್ತಿಸುತ್ತಿದ್ದರು. ಈ ಹರೇಕೃಷ್ಣ ಕೀರ್ತನ ಅಥವಾ ಮಂತ್ರವು, ದಿವ್ಯಶಬ್ದೋಚ್ಚಾರವಾಗಿದೆ. ಅದು ಮನಸ್ಸನ್ನು ಶುದ್ಧಗೊಳಿಸುತ್ತದೆ ಮತ್ತು ಸಕಲ ಜೀವಿಗಳ ಹೃದಯದಲ್ಲಿ ಸುಪ್ತವಾಗಿರುವ ಭಗವತ್ಪ್ರೇಮವನ್ನು ಜಾಗೃತಗೊಳಿಸುತ್ತದೆ. ಶ್ರೀ ಚೈತನ್ಯರು ಈ ಕೀರ್ತನೆಯನ್ನು ಜಗತ್ತಿನ ಪ್ರತಿಯೊಂದು ಪಟ್ಟಣ ಮತ್ತು ಹಳ್ಳಿಗೆ ಪ್ರಚಾರ ಮಾಡುವಂತೆ ತಮ್ಮ ಅನುಯಾಯಿಗಳನ್ನು ಕೇಳಿಕೊಂಡರು.

ಹರೇಕೃಷ್ಣ ಕೀರ್ತನೆಯಲ್ಲಿ ಯಾರು ಬೇಕಾದರೂ ಪಾಲ್ಗೊಳ್ಳಬಹುದು ಮತ್ತು ಭಗವದ್ಗೀತೆಯ ಅಧ್ಯಯನದ ಮೂಲಕ ಆಧ್ಯಾತ್ಮಿಕ ಭಕ್ತಿಯ ವಿಜ್ಞಾನವನ್ನು ಕಲಿಯಬಹುದು. ಆತ್ಮಸಾಕ್ಷಾತ್ಕಾರದ ಈ ಸುಲಭಸಾಧ್ಯ ಪ್ರಕ್ರಿಯೆಯು ನಮ್ಮ ಸ್ವಾಭಾವಿಕ ಸುಖಶಾಂತಿಗಳ ಸ್ಥಿತಿಯನ್ನು ಜಾಗೃತಗೊಳಿಸುವುದು.

## ಹರೇಕೃಷ್ಣ ಜೀವನ ಶೈಲಿ

ಸಾಂಪ್ರದಾಯಿಕ ಭಾರತೀಯ ಉಡುಪುಗಳನ್ನು ಧರಿಸಿ ಬೀದಿಗಳಲ್ಲಿ ನರ್ತಿಸುತ್ತಾ ಮತ್ತು ಕೀರ್ತಿಸುತ್ತಾ ಕಾಣಬರುವ ಭಕ್ತರು ಬಹುತೇಕವಾಗಿ ಹರೇಕೃಷ್ಣ ಆಂದೋಲನದ ಪೂರ್ಣಕಾಲಿಕ ಶಿಷ್ಯರು. ಆದರೆ ಅನುಯಾಯಿಗಳಲ್ಲಿ ಬಹು ಜನರು ತಮ್ಮ ತಮ್ಮ ಮನೆಗಳಲ್ಲಿ ಕೃಷ್ಣಪ್ರಜ್ಞೆಯನ್ನು ಆಚರಿಸುತ್ತಾ ತಪ್ಪದೇ ಮಂದಿರಗಳಿಗೆ ಹೋಗುತ್ತಾ ಜನಸಾಮಾನ್ಯರ ಮಧ್ಯದಲ್ಲಿ ಕಾರ್ಯನಿರತರಾಗಿ ಬಾಳುತ್ತಾರೆ.

ಇಡೀ ಜಗತ್ತಿನಲ್ಲಿ ಸುಮಾರು 3000ದಷ್ಟು ಪೂರ್ಣಕಾಲಿಕ ಭಕ್ತರಿದ್ದಾರೆ ಮತ್ತು 2,00,000ದಷ್ಟು ಸಾಮೂಹಿಕ ಸದಸ್ಯರಿದ್ದಾರೆ. ಈ ಆಂದೋಲನದಲ್ಲಿ 71 ದೇಶಗಳಲ್ಲಿ 167 ಮಂದಿರಗಳಿವೆ, 40 ಗ್ರಾಮೀಣ ಸಮುದಾಯಗಳಿವೆ, 26 ಶಾಲೆಗಳಿವೆ ಮತ್ತು 45 ಉಪಾಹಾರ ಗೃಹಗಳಿವೆ.

ಮಾನವನ ಸಹಜ ಆಧ್ಯಾತ್ಮಿಕ ತತ್ತ್ವಗಳಾದ ಸಹಾನುಭೂತಿ, ಸತ್ಯನಿಷ್ಠೆ, ನೈರ್ಮಲ್ಯ ಮತ್ತು ವ್ರತೋಪವಾಸಗಳನ್ನು ಪುನರುಜ್ಜೀವಿಸಲು ಹಾಗೂ ಮನಸ್ಸಿನ ಮೇಲೆ ಮತ್ತು ಭೌತಿಕ ಇಂದ್ರಿಯಗಳ ಮೇಲೆ ನಿಯಂತ್ರಣ ಹೊಂದಲು ಭಕ್ತರು ಕೂಡ ಈ ನಾಲ್ಕು ನಿಯಮಗಳನ್ನು ಅನುಸರಿಸುತ್ತಾರೆ.

1) ಮಾಂಸ, ಮೀನು ಅಥವಾ ಮೊಟ್ಟೆಗಳನ್ನು ಸೇವಿಸದಿರುವುದು,
2) ಜೂಜಾಟವಾಡದಿರುವುದು,
3) ನಿಷಿದ್ಧ ಸಂಭೋಗ ಮಾಡದಿರುವುದು,
4) ತಂಬಾಕು, ಕಾಫಿ ಮತ್ತು ಟೀ ಇವುಗಳೂ ಸೇರಿ ಯಾವ ಬಗೆಯ ಮದ್ಯಪಾನ ಮಾಡದಿರುವುದು.

ಭಗವದ್ಗೀತೆಯ ಪ್ರಕಾರ ಮೇಲೆ ಹೇಳಿದ ಚಟುವಟಿಕೆಗಳಲ್ಲಿ ತೊಡಗುವುದು ನಮ್ಮ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಸ್ವಾಸ್ಥ್ಯವನ್ನು ಹದಗೆಡಿಸುತ್ತದೆ ಮತ್ತು ಸಮಾಜದಲ್ಲಿ ಆತಂಕ ಮತ್ತು ಘರ್ಷಣೆಗಳನ್ನು ಹೆಚ್ಚಿಸುತ್ತದೆ.

## ಪ್ರತಿಯೊಬ್ಬನಿಗಾಗಿ ತತ್ತ್ವಜ್ಞಾನ

ಹರೇಕೃಷ್ಣ ಆಂದೋಲನದ ತತ್ತ್ವಜ್ಞಾನವನ್ನು (ಏಕೋದೇವ ಸಂಪ್ರದಾಯವು) ಈ ಮುಂದಿನ ಎಂಟು ಅಂಶಗಳಲ್ಲಿ ಸಂಕ್ಷೇಪವಾಗಿ ಹೇಳಲಾಗಿದೆ:

1) ಅಧಿಕೃತ ಅಧ್ಯಾತ್ಮ ವಿಜ್ಞಾನವನ್ನು ಪ್ರಾಮಾಣಿಕವಾಗಿ ಆಚರಿಸುವುದರ ಮೂಲಕ ನಾವು ಭಯದಿಂದ ಮುಕ್ತರಾಗಿ ಶುದ್ಧ ಮತ್ತು ಶಾಶ್ವತ ಆನಂದಮಯ ಪ್ರಜ್ಞೆಯನ್ನು ಹೊಂದಬಹುದು.

2) ನಾವು ಪ್ರತಿಯೊಬ್ಬರೂ ಭೌತಿಕ ಶರೀರವಲ್ಲ, ಭಗವಂತನ (ಕೃಷ್ಣನ) ವಿಭಿನ್ನಾಂಶರಾದ ಶಾಶ್ವತ ಚೇತನಾತ್ಮರು. ಹೀಗಾಗಿ, ನಾವೆಲ್ಲರೂ ನಮ್ಮೆಲ್ಲರ ಪಿತನಾದ ಕೃಷ್ಣನ ಮೂಲಕ ಪರಸ್ಪರ ಸಂಬಂಧಿಕರು.

3) ಕೃಷ್ಣನು ನಿತ್ಯನು, ಸರ್ವಜ್ಞ, ಸರ್ವಾಂತರ್ಯಾಮಿ, ಸರ್ವಶಕ್ತ ಮತ್ತು ಸರ್ವಾಕರ್ಷಕನು. ಅವನು ಸಕಲ ಜೀವಿಗಳಿಗೆ ಬೀಜಪ್ರದ ಪಿತನು ಮತ್ತು ಬ್ರಹ್ಮಾಂಡದ ಪೋಷಕ ಶಕ್ತಿ. ಅವನು, ಶ್ರೀ ಬುದ್ಧ ಮತ್ತು ಏಸುಕ್ರಿಸ್ತನೂ ಸೇರಿದಂತೆ ದೇವರ ಸಕಲ ಅವತಾರಗಳ ಮೂಲನು.

4) ವೇದಗಳು ಜಗತ್ತಿನ ಪ್ರಾಚೀನತಮ ಶಾಸ್ತ್ರಗಳು. ವೇದಗಳ ಸಾರವನ್ನು ಭಗವದ್ಗೀತೆಯಲ್ಲಿ ಕಾಣುತ್ತೇವೆ. ಅದು 5,000 ವರ್ಷಗಳ ಹಿಂದೆ ಭಾರತದಲ್ಲಿ ಪ್ರೋಕ್ತವಾದ ಕೃಷ್ಣನ ವಚನಗಳ ಶಬ್ದಶಃವಾದ ಆಧಾರ ಗ್ರಂಥ. ವೇದಜ್ಞಾನದ ಮತ್ತು ಸಕಲ ಧರ್ಮಗಳ ಗುರಿಯು ಭಗವತ್ಪ್ರೀತಿಯನ್ನು ಪಡೆಯುವುದಾಗಿದೆ.



5) ಸ್ವಾರ್ಥರಹಿತರಾಗಿ ಕೃಷ್ಣನ ಧ್ಯಾನದಲ್ಲಿ ಮನಸ್ಸನ್ನು ದೃಢವಾಗಿ ಸ್ಥಿತಗೊಳಿಸಿದ ನಿಜಗುರುಗಳ ಉಪದೇಶಗಳ ಮೂಲಕ ನಾವು ಆತ್ಮಸಾಕ್ಷಾತ್ಕಾರದ ಜ್ಞಾನವನ್ನು ಪರಿಪೂರ್ಣವಾಗಿ ಅರಿತುಕೊಳ್ಳಬಹುದು.

6) ನಾವು ಉಣ್ಣುವುದೆಲ್ಲವನ್ನೂ ಪ್ರಾರ್ಥನೆಯೊಂದಿಗೆ ಮೊದಲು ಕೃಷ್ಣನಿಗೆ ಅರ್ಪಿಸಬೇಕು. ಹೀಗೆ ಕೃಷ್ಣನು ಅರ್ಪಣೆಯನ್ನು ಸ್ವೀಕರಿಸುತ್ತಾನೆ ಮತ್ತು ನಮ್ಮ ಶುದ್ಧಿಗಾಗಿ ಅದನ್ನು ಪ್ರಸಾದೀಕರಿಸುತ್ತಾನೆ.

7) ಸ್ವಾರ್ಥಿಯಾಗಿ ಬಾಳುವುದಕ್ಕಿಂತ, ನಾವು ಕೃಷ್ಣನ ತುಷ್ಟಿಗಾಗಿ ಕರ್ಮ ಮಾಡಬೇಕು. ಇದನ್ನು ಭಕ್ತಿಯುತ ಸೇವೆಯ ವಿಜ್ಞಾನವಾದ ಭಕ್ತಿಯೋಗ ಎಂದು ಕರೆಯಲಾಗಿದೆ.

8) ಈ ಕಲಿ ಅಥವಾ ಕಲಹದ ಯುಗದಲ್ಲಿ ಭಗವತ್ಪ್ರಜ್ಞೆಯನ್ನು ಹೊಂದಲು ಅತ್ಯಂತ ಪರಿಣಾಮಕಾರಿಯಾದ ಮಾರ್ಗವೆಂದರೆ, ಹರೇ ಕೃಷ್ಣ, ಹರೇ ಕೃಷ್ಣ, ಕೃಷ್ಣ ಕೃಷ್ಣ ಹರೇ ಹರೇ / ಹರೇ ರಾಮ, ಹರೇ ರಾಮ, ರಾಮ ರಾಮ ಹರೇ ಹರೇ ಎಂಬ ಭಗವಂತನ ಪುಣ್ಯನಾಮವನ್ನು ಕೀರ್ತಿಸುವುದು.



ಹೇ ಪೃಥಾಪುತ್ರನೇ, ವಿಚಲಿತನಾಗದೆ ಸದಾ ನನ್ನನ್ನು ಸ್ಮರಿಸುವವನಿಗೆ, ಭಕ್ತಿಯುತ ಸೇವೆಯಲ್ಲಿ ಅವನ ಸತತ ನಿರತತೆಯ ಕಾರಣ, ನಾನು ಸುಲಭ ಲಭ್ಯನು. ಭೌತಿಕ ಜಗತ್ತಿನಲ್ಲಿ ಅತ್ಯುನ್ನತ ಲೋಕದಿಂದ ಅತ್ಯಂತ ಅಧೋಲೋಕದವರೆಗೆ ಎಲ್ಲವೂ ಆವರ್ತಿತ ಹುಟ್ಟು ಮತ್ತು ಸಾವುಗಳಾಗುವ ಕ್ಲೇಶದ ನೆಲೆಗಳು. ಆದರೆ, ಹೇ ಕುಂತೀಪುತ್ರನೇ, ನನ್ನ ಧಾಮವನ್ನು ಸೇರಿದವನು ಎಂದಿಗೂ ಮತ್ತೆ ಜನಿಸುವುದಿಲ್ಲ.

(ಭಗವದ್ಗೀತ 8.14, 8.16)

---

ಗ್ರಂಥಕರ್ತರಾದ ಶ್ರೀ ಶ್ರೀಮದ್ ಎ.ಸಿ. ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಅಧಿಕೃತ ಭಾಷಾಂತರಗಳ ಎಪ್ಪತ್ತಕ್ಕೂ ಹೆಚ್ಚು ಸಂಪುಟಗಳನ್ನು, ವ್ಯಾಖ್ಯಾನಗಳನ್ನು ಮತ್ತು ಭಾರತದ ಪ್ರಾಚೀನ ಧರ್ಮ ಗ್ರಂಥಗಳ ದಾರ್ಶನಿಕ ಸಂಕ್ಷಿಪ್ತ ಅಧ್ಯಯನಗಳನ್ನು ಬರೆದಿದ್ದಾರೆ. ಅವುಗಳ ಪ್ರಾಮಾಣ್ಯ, ಆಳ ಮತ್ತು ಸ್ಪಷ್ಟತೆಗಾಗಿ ವಿದ್ವದ್ ವಲಯಗಳಲ್ಲಿ ಬಹಳಷ್ಟು ಗೌರವಿಸಲ್ಪಟ್ಟು, ಅವು ಜಗತ್ತಿನಲ್ಲೆಲ್ಲ ಅನೇಕ ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಶ್ರೇಷ್ಠದರ್ಜೆಯ ಪಠ್ಯ ಪುಸ್ತಕಗಳಾಗಿವೆ.